# ಕರ್ನಾಟಕ ಲೋಚನ

ಸಂಪುಟ ೫ ಜೂನ್ ೧೯೯೨ ಸಂಚಿಕೆ ೧






## ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

Annual Subn : Rs. 10-00
Subn for life : 100-00

ವಾರ್ಷಿಕ ಚಂದಾ ರೂ. ೧೦-೦೦
ಆಜೀವ : ೧೦೦-೦೦

# 'ಕರ್ನಾಟಕ ಲೋಚನ'

## ಸಂಪಾದಕ ಮಂಡಲಿ



## ಲೇಖನಗಳು–ಟಿಪ್ಪಣಿಗಳು

ಸಂಶೋಧನಾತ್ಮಕ ಪಾಂಡಿತ್ಯಪೂರ್ಣ ಲೇಖನಗಳು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು-ಇವುಗಳ ಮೇಲಣ ವಿಮರ್ಶೆಗಳು, ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಮಾನ ಇವುಗಳಿಗೆ ಸಂಬಂಧಿಸಿದ ಟೀಕೆ ಟಿಪ್ಪಣಿಗಳು - ಇವುಗಳಿಗೆ 'ಲೋಚನ' ಮೀಸಲಾಗಿದೆ.

ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬುದಾರರು; ಅವು ಅವಶ್ಯವಾಗಿ ಪ್ರತಿಷ್ಠಾನದ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಎಂದು ತಿಳಿಯತಕ್ಕದ್ದಲ್ಲ.

## ಲೇಖನಗಳಿಗೆ ಆಹ್ವಾನ

ಮೇಲ್ಕಂಡ ವಾಕ್ಯವೃಂದದಲ್ಲಿ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾಗಿ ಲೇಖನಗಳನ್ನು ವಿದ್ವಾಂಸರೂ ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. 'ಲೋಚನ'ದ ಗಾತ್ರ ಪರಿಮಿತವಾದದ್ದರಿಂದ ಲೇಖನಗಳು ಅಚ್ಚಿನ 6-8 ಪುಟಗಳ ಪರಿಮಿತಿಯಲ್ಲಿ ಇದ್ದರೆ ಅನುಕೂಲ. ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ–ಲೇಖನಾಧಾರ ವಿವರಗಳನ್ನು (Bibliography) ಲೇಖನದ ಕಡೆಯಲ್ಲಿ ಕೊಡಬಹುದು. ಲೇಖನವನ್ನು ಹಿಂದಿರುಗಿಸಲಾಗದ್ದರಿಂದ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ಕೋರಿಕೆ.

## ವಿನಿಮಯ ಪತ್ರಿಕೆಗಳು

1. ಪ್ರಬುದ್ಧ ಕರ್ಣಾಟಕ, ಮಾನವಿಕ ಕರ್ಣಾಟಕ, ವಿಜ್ಞಾನ ಕರ್ಣಾಟಕ (ಮೈಸೂರು),
2. ಸಾಧನೆ (ಬೆಂಗಳೂರು), 3. ಗ್ರಂಥಲೋಕ (ಮೈಸೂರು), 4. ತರಳಬಾಳು (ಸಿರಿಗೆರೆ),
5. ಅಂಕಣ (ಬೆಂಗಳೂರು), 6. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಕನ್ನಡ ನುಡಿ (ಬೆಂಗಳೂರು),
7. ಶಂಕರ ಭಾಸ್ಕರ (ಬೆಂಗಳೂರು), 8. ಸುಗುಣಮಾಲಾ (ಉಡುಪಿ). 9. ಧರ್ಮಪ್ರಭ (ಬೆಂಗಳೂರು)

## ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಲೇಖಕರು ಕಳಿಸಬೇಕು

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ; ಆದರೆ ಕಳಿಸಿದರೆ 'ಸ್ವೀಕಾರ' ಭಾಗದಲ್ಲಿ ಗಮನಿಸಲಾಗುವುದು. ವೈಶಿಷ್ಟ್ಯವುಳ್ಳ ಅಂಥ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.

ಕರ್ನಾಟಕ ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

54, 3ನೇ ಕ್ರಾಸ್. ಗವೀಪುರ ವಿಸ್ತರಣ, ಬೆಂಗಳೂರು–19

ಸಂಪಾದಕರು : ವಿದ್ವಾನ್ ಟಿ. ಕೇಶವ ಭಟ್ಟ

ಸಹ ಸಂಪಾದಕರು : ಎನ್. ಎಸ್. ರಾಮಸ್ವಾಮಿ ಅಯ್ಯರ್

ಸಂಪುಟ ೫ ಜೂನ್ ೧೯೯೨ ಸಂಚಿಕೆ ೧

## ಪರಿವಿಡಿ

# Karnataka Lochana

Half-Yearly, Journal, Published by B. M. Sri Memorial Foundation, 54, 3rd Cross, Gavipura Extn. Bangalore-560 019

Chairman, Editorial Board: *Sri N. Basavaradhya*

Editor: *Vidvan T. Keshava Bhat*

*Vol. V* *June 1992* *No. 1*

## CONTENTS

# ಕನ್ನಡ ಸಣ್ಣಕತೆಯು ಬೇರುಗಳು*

ಬಿ. ಎಸ್. ರಾಮುಪ್ರಸಾದ್

## ಸಣ್ಣ ಕತೆಯು ಲಕ್ಷಣಗಳು

ವೇಗ, ಚಲನಶೀಲತೆ, ಉತ್ಸಾಹ ಮತ್ತು ಆತಂಕಗಳಿಂದ ಕೂಡಿರುವ ಆಧುನಿಕ ಯುಗದ ಮನೋಧರ್ಮವನ್ನು ಪ್ರತಿಬಿಂಬಿಸುವ ಒಂದು ಸಾಹಿತ್ಯ ಪ್ರಕಾರವಾಗಿ ಬೆಳೆದಿರುವ ಆಧುನಿಕ ಸಣ್ಣಕತೆ ಜಗತ್ತಿನಾದ್ಯಂತ ಆವರಿಸಿಕೊಂಡಿದೆ. ಅಮೆರಿಕ ಮತ್ತು ಯುರೋಪ್‌ಗಳಲ್ಲಿ ಹತ್ತೊಂಬತ್ತನೆಯ ಶತಮಾನದ ಮೊದಲ ದಶಕಗಳಿಂದಲೇ ವೃತ್ತಪತ್ರಿಕೆಗಳು ಮತ್ತು ನಿಯತಕಾಲಿಕ ಪತ್ರಿಕೆಗಳ ಪ್ರಸಾರವು ಗಣನೀಯವಾದ ಪ್ರಮಾಣವನ್ನು ತಲುಪಿದ್ದಿತು. ಆಧುನಿಕ ಸಣ್ಣಕತೆ ಮತ್ತು ಪ್ರಬಂಧಗಳು ಈ ಪತ್ರಿಕಾ ಪುಟಗಳಲ್ಲಿ ಅರಳಿದ ಸಾಹಿತ್ಯ ಪ್ರಕಾರಗಳು. ಅಮೆರಿಕದಲ್ಲಿ ಸಣ್ಣಕತೆಯು ವಿಶೇಷವಾದ ಬೆಳವಣಿಗೆ ಸಾಧಿಸಿದರೆ, ಪ್ರಬಂಧವು ಇಂಗ್ಲೆಂಡ್ ಮತ್ತು ಫ್ರಾನ್ಸ್‌ಗಳಲ್ಲಿ ಬಹುಮುಖವಾಗಿ ಬೆಳೆಯಿತು. ಸಣ್ಣಕತೆ ತುಂಬ ಜನಪ್ರಿಯವಾದ ಸಾಹಿತ್ಯ ಪ್ರಕಾರವಾಗಿದ್ದು ವ್ಯಾಪಕ ಬೆಳವಣಿಗೆಯನ್ನು ಹೊಂದಿದ್ದರೂ ಕೂಡ, ಈ ಪ್ರಕಾರದ ಲಕ್ಷಣಗಳನ್ನೂ ಮತ್ತು ಸಾವಿರಾರು ವರ್ಷಗಳಿಂದ ಬೆಳೆದು ಬಂದಿರುವ ಸಾಂಪ್ರದಾಯಿಕ ಶಿಷ್ಟ ಕಥಾ ಪರಂಪರೆ ಮತ್ತು ಜಾನಪದ ಕಥಾ ಪರಂಪರೆಗೂ ಆಧುನಿಕ ಸಣ್ಣಕತೆಗಳಿಗೂ ಇರಬಹುದಾದ ಜೈವಿಕ ಸಂಬಂಧಗಳನ್ನೂ ಶೋಧಿಸುವಂತಹ ಲೇಖನಗಳು ಕನ್ನಡದಲ್ಲಿಲ್ಲ. ಇಂಗ್ಲಿಷಿನಲ್ಲಿಯೂ ಅಪರೂಪ ಎಂದೇ ಹೇಳಬೇಕು. ಕನ್ನಡದ ಸಣ್ಣಕತೆಗೆ ಸಂಬಂಧಿಸಿದ ಹಾಗೆ ಈ ದಿಕ್ಕಿನಲ್ಲಿ ಕೆಲವು ವಿಚಾರಗಳನ್ನು ಮಂಡಿಸುವುದು ಪ್ರಸ್ತುತ ಬರವಣಿಗೆಯ ಉದ್ದೇಶ.

ಸಣ್ಣಕತೆಗಳ ಅಧ್ಯಯನ ಮಾಡಬೇಕಾದ ಸಂದರ್ಭದಲ್ಲಿಯಾಗಲಿ, ಸಣ್ಣಕತೆಗಳ ಕ್ಷೇತ್ರದಲ್ಲಿ ಬರಹಗಾರನೊಬ್ಬನ ಸಾಧನೆಗಳನ್ನು ಪರಿಶೀಲಿಸಬೇಕಾದ ಸಂದರ್ಭದಲ್ಲಿಯಾಗಲಿ ಈ ಸಾಹಿತ್ಯ ಪ್ರಕಾರ ಬೆಳೆದು ಬಂದಿರುವ ರೀತಿಯನ್ನೂ ಗಮನದಲ್ಲಿರಿಸಿಕೊಳ್ಳುವುದು ಲಾಭದಾಯಕವಾಗುತ್ತದೆ. ವಿಮರ್ಶಕನಿಗೆ ಚಾರಿತ್ರಿಕ ದೃಷ್ಟಿಯೂ

* ದತ್ತಿ ಉಪನ್ಯಾಸ, ಬಿ.ಎಂ.ಶ್ರೀಸ್ಮಾರಕ 26-2-92

ಬೇಕಾಗುತ್ತದೆ. "ಪ್ರಕಾರದ ಪ್ರಶ್ನೆಯೇ ಹುಸಿ ಪ್ರಶ್ನೆ[1]." ಎಂಬ ಧೋರಣೆ ಹಾಗೂ ಸಾಹಿತ್ಯ ಕೃತಿಯೂ ಒಂದು ವಸ್ತು. ಆದುದರಿಂದ ಪರಿಶೀಲನೆಯಲ್ಲಿರುವ ಸಾಹಿತ್ಯ ಕೃತಿಯೊಂದೇ ಮುಖ್ಯವಾದುದು ಎಂಬ ಭಾವನೆಯಿದ ಅನುಗಮನ ವಿಧಾನವನ್ನು ಅನುಸರಿಸಿದಾಗ ಸಾಹಿತ್ಯ ವಿಮರ್ಶೆ ದಾರಿ ತಪ್ಪುತ್ತದೆ. ಈ ಹಾದಿ ಹಿಡಿದು ಹೊರಟಾಗ ವ್ಯಾಪಕವಾದ ಅಧ್ಯಯನ ಮತ್ತು ಆಳವಾದ ಚಿಂತನೆಯ ಅನಂತರ ಕೂಡ ಸರ್ವಥಾ ಗ್ರಾಹ್ಯವಲ್ಲದ ತೀರ್ಮಾನಗಳು ಮಂಡಿತವಾಗುತ್ತವೆ. ನಮ್ಮ ವಿಮರ್ಶ ಸಿದ್ಧಾಂತಗಳನ್ನು ಅನುಸರಿಸಿದ ಹಲವು ಅಧ್ಯಯನಗಳು ಈ ರೀತಿಯಾಗಿವೆ. ನಿದರ್ಶನಕ್ಕಾಗಿ 'ಆಧುನಿಕ ಭಾರತೀಯ ಸಾಹಿತ್ಯ' ಕೃತಿಯಲ್ಲಿ ಎಂ. ಜಿ. ಕೃಷ್ಣಮೂರ್ತಿಯವರು ಮಾಸ್ತಿಯವರ ಕತೆಗಳ ಬಗೆಗೆ ತಳೆದಿರುವ ನಿಲುವುಗಳನ್ನು ನೋಡಬಹುದು. ಆದರೆ ಪ್ರಕಾರ ವಿಮರ್ಶೆ ಮತ್ತು ಚಾರಿತ್ರಿಕ ದೃಷ್ಟಿಯ ಹೆಸರಿನಲ್ಲಿ ಸಾಹಿತ್ಯ ವಿಮರ್ಶೆಯ ಕೇವಲ ವರ್ಗೀಕರಣ ಶಾಸ್ತ್ರವಾಗದಂತೆ ಎಚ್ಚರವಹಿಸಬೇಕಾದುದು ಮಾತ್ರ ಅತ್ಯಗತ್ಯ.

ಸಣ್ಣಕತೆಯೆಂದರೇನು ? ಅದರ ಸ್ವರೂಪವೇನು ? ಈ ಪ್ರಶ್ನೆಗಳನ್ನು ಕೇಳುವುದು ಸುಲಭ! ಉತ್ತರಿಸುವುದು ಕಷ್ಟ. ಸಣ್ಣಕತೆಯೆಂಬ ಸಾಹಿತ್ಯ ರೂಪದ ಹಿಗ್ಗು-ಕುಗ್ಗುವ ಸಾಮರ್ಥ್ಯ ಅಪಾರವಾದುದಾಗಿದೆ. ಸಣ್ಣಕತೆಯ ಸ್ವರೂಪವನ್ನು ಸೂತ್ರದಲ್ಲಿ ಹಿಡಿದಿಡುವುದು ಕಷ್ಟವಾದರೂ ಅಂತಹ ಪ್ರಯತ್ನಗಳು ನಡೆದಿವೆ. ಈ ಪ್ರಯತ್ನಗಳು ಕೆಲವೊಮ್ಮೆ ತಮಾಷೆಯಾಗಿಯೂ ಕಾಣುತ್ತವೆ. 'ಮಾಡರ್ನ್ ಶಾರ್ಟ್ ಸ್ಟೋರೀಸ್' ಎಂಬ ಇಂಗ್ಲಿಷ್ ಸಣ್ಣಕತೆಗಳ ಸಂಕಲನವೊಂದರ ಸಂಪಾದಕನ ಉದ್ಗಾರವಿದು "ಸಣ್ಣ ಕತೆ, ಕತೆಯಾಗಿರಬೇಕು ; ಅದು ಸಣ್ಣದಾಗಿಯೂ ಇರಬೇಕು." ಎಚ್. ಜಿ. ವೆಲ್ಸ್ "ಅರ್ಧ ಗಂಟೆಯ ಕಾಲಾವಧಿಯೊಳಗೆ ಓದಬಹುದಾದ ಯಾವುದೇ ಸಂಕ್ಷಿಪ್ತ ಕಥನ"[2] ಎಂಬ ಮಾತುಗಳಲ್ಲಿ ಸಣ್ಣಕತೆಯ ಸ್ವರೂಪವನ್ನು ಸೂತ್ರಪ್ರಾಯವಾಗಿ ವಿವರಿಸಲು ಪ್ರಯತ್ನಿಸುತ್ತಾನೆ. ಮೇಲಿನ ಪ್ರಯತ್ನಗಳಿಗಿಂತಲೂ ಗಂಭೀರವೂ ಫಲಪ್ರದವೂ ಆದುದು ಎಂ.ಎಚ್.ಅಬ್ರಾಮ್ಸ್‌ನ[3] ವಿವರಣೆ-"ಗದ್ಯದಲ್ಲಿರುವ ಕಥನವೇ

---

1 ಸಿ. ಎನ್. ರಾಮಚಂದ್ರನ್, ಸಾಹಿತ್ಯ ವಿಮರ್ಶೆ. ಕರ್ನಾಟಕ ಸಾಹಿತ್ಯ ಅಕಾದೆಮಿ, 1989. ಪು. 59

2 ಉದಾಹೃತ. ಎಚ್. ಇ. ಬೇಟ್ಸ್-ದಿ ಮಾಡರ್ನ್ ಶಾರ್ಟ್ ಸ್ಟೋರಿ. ಮೈಕೆಲ್ ಜೋಸೆಫ್-ಲಂಡನ್, ಮೂರನೆ ಆವೃತ್ತಿ 1971. ಪು. 17

3 ಎಂ. ಎಚ್. ಅಬ್ರಾಮ್ಸ್. ಎ ಗ್ಲಾಸರಿ ಆಫ್ ಲಿಟರರಿ ಟರ್ಮ್ಸ್. ಹೋಲ್ಟ್ ರೈನ್ ಹಾರ್ಟ್ ಅಂಡ್ ವಿನ್‌ಸ್ಟನ್. ಇನ್‌ಕಾ. ಮೂರನೆ ಆವೃತ್ತಿ 1971. ಪು. 157 ರಿಂದ 159.

ಸಣ್ಣಕತೆ........................ತನ್ನ ಪಾತ್ರಗಳ ಕ್ರಿಯೆ–ಪ್ರಕ್ರಿಯೆಗಳನ್ನೂ, ಆಲೋಚನೆಗಳನ್ನೂ, ಕಲಾತ್ಮಕವಾದ ವಸ್ತು ವಿರಚನೆಯಲ್ಲಿ ವ್ಯವಸ್ಥಿತಗೊಳಿಸುತ್ತದೆ. ಸಣ್ಣ ಕತೆಗೆ ಆರಂಭವಿದೆ, (ಕಥಾ ವಸ್ತು ಬೆಳೆಯುವ) ಮಧ್ಯ ಭಾಗವಿದೆ. ವಸ್ತುವಿನ ಸಿಕ್ಕು ತೊಡಕುಗಳನ್ನು ಬಿಡಿಸುವ ಮುಕ್ತಾಯವಿರುತ್ತದೆ. ಇಡೀ ಕತೆಯಲ್ಲಿ ಒಂದೇ ಒಂದು ದೃಷ್ಟಿ ವ್ಯಕ್ತವಾಗುತ್ತದೆ." ಡಾ॥ ಅನುಪಮ ನಿರಂಜನ[4] ಅವರು "ಜೀವನದ ಅನುಭವವನ್ನು ಭಾವನೆಯಿಂದ ಗ್ರಹಿಸಿ ಭಾಷೆಯ ಮಾಧ್ಯಮವನ್ನು ಬಳಸಿಕೊಂಡು ಬುದ್ಧಿಯ ಮೂಲಕ ಆ ಜಗತ್ತನ್ನು ಪುನಃಸೃಷ್ಟಿಸುವುದೇ ಕತೆ" ಎಂದು ವಿವರಿಸಿದ್ದಾರೆ.

ಎಲ್ಲ ಕಲಾ ಪ್ರಕಾರಗಳಂತೆಯೇ ಸಣ್ಣ ಕತೆ ಕೂಡ ಒಂದು ಪ್ರತಿಸೃಷ್ಟಿಯಾಗಿದೆ. ಸಾಹಿತ್ಯದ ಇತರ ಪ್ರಕಾರಗಳಿಗೆ ಹೋಲಿಸಿದರೆ ಸಣ್ಣ ಕತೆಯ ಹಾಸು ಬೀಸುಗಳು ಸೀಮಿತವಾದುವು. 'ಕಿರಿದಱೊಳ್ ಪಿರಿದರ್ಥ'ವನ್ನು ಹೇಳುವುದು ಇದರ ರೀತಿ. ಇದು ಸಣ್ಣಕತೆಯು ಸಾಂಪ್ರದಾಯಿಕ ಕತೆಯಿಂದ ಅನುವಂಶಿಕವಾಗಿ ಗಳಿಸಿಕೊಂಡಿರುವ ಗುಣವಾಗಿದೆ. ಪ್ರಕಾರದ ವ್ಯಾಪ್ತಿ ಕಿರಿದಾದುದರಿಂದ ಕತೆಯಲ್ಲಿ ಹೆಚ್ಚು ಘಟನೆಗಳು ನುಗ್ಗಿ ಬರಲು ಅವಕಾಶವಿಲ್ಲ. ಹೆಚ್ಚಿನ ಸಂಖ್ಯೆಯಲ್ಲಿ ಪಾತ್ರಗಳು ಕಾಣಿಸಿಕೊಳ್ಳುವಂತಿಲ್ಲ. ಪಾತ್ರಗಳ ವ್ಯಾಪಕವಾದ ಮತ್ತು ವಿಸ್ತೃತವಾದ ಬೆಳವಣಿಗೆಯನ್ನು ಕತೆಯ ಸಂದರ್ಭದಲ್ಲಿಯೇ ದಾಖಲು ಮಾಡಲಾಗುವುದಿಲ್ಲ. ಪಾತ್ರಗಳ ಹಾಗೂ ಸನ್ನಿವೇಶಗಳ ಘರ್ಷಣೆಯೂ ಕೂಡ ಸೀಮಿತವಾದುದಾಗಿದ್ದು, ಕತೆಯಲ್ಲಿನ ಘಟನೆಗಳು ಮುಕ್ತಾಯದ ಕಡೆಗೆ ಧಾವಿಸುತ್ತಿರುತ್ತವೆ. ಈ ಎಲ್ಲ ಇತಿ ಮಿತಿಗಳ ನಡುವೆ ಬೆಳೆಯುವ 'ಸಣ್ಣ' ಕತೆಯು ಓದುಗನ ಮೇಲೆ ಉಂಟು ಮಾಡುವ ಪರಿಣಾಮ ಮಾತ್ರ ಸಣ್ಣದಲ್ಲ. ಕತೆಯು ವಸ್ತು, ಪಾತ್ರ, ಸನ್ನಿವೇಶಗಳನ್ನು ಒಂದು ನಿರ್ದಿಷ್ಟವಾದ ಪರಿಣಾಮದ ಕಡೆಗೆ ನಡೆಸಬೇಕಾಗಿರುವುದೇ ಕತೆಗಾರನ ಮುಂದಿರುವ ಬಹು ದೊಡ್ಡ ಸವಾಲು. ಸಣ್ಣಕತೆಯ ಸ್ವರೂಪವನ್ನು ವಿವರಿಸಲು 'ಪರಿಣಾಮ ರಮಣೀಯತೆ' ಎಂಬ ಮಾತುಗಳನ್ನು ಬಳಸಬಹುದಾಗಿದೆ. ಇದೇ ಸಣ್ಣ ಕತೆಯ ಅತಿ ಮುಖ್ಯ ಲಕ್ಷಣ.

ಭಾವ ತೀವ್ರತೆ ಮತ್ತು ಸಂಕ್ಷಿಪ್ತತೆಗಳು ಸಣ್ಣಕತೆಯ ಮತ್ತೆರಡು ಮುಖ್ಯ ಲಕ್ಷಣಗಳಾಗಿವೆ. ಇವು ಆಧುನಿಕ ಭಾವಗೀತದ ಮುಖ್ಯ ಲಕ್ಷಣಗಳೂ ಹೌದು. ಆಧುನಿಕ ಸಣ್ಣಕತೆಯ ಬೆಳವಣಿಗೆಯಲ್ಲಿ ಮೊದಲ ಹಂತದ ಸಣ್ಣಕತೆಗಳ ಸ್ವರೂಪಕ್ಕೂ ಭಾವಗೀತಗಳ ಸ್ವರೂಪಕ್ಕೂ ಸ್ವಲ್ಪಮಟ್ಟಿಗೆ ಸಾಮ್ಯವಿದೆ. "ಸಣ್ಣಕತೆ ಭಾವಗೀತ

---

4 ಡಾ॥ ಅನುಪಮ ನಿರಂಜನ – ಸಣ್ಣಕತೆ. ಅಂಕಣ ಸೆಪ್ಟೆಂಬರ್ – ಅಕ್ಟೋಬರ್ 1986 ಪು. 35.

ಗಳೆರಡು ರೂಪಗಳೂ ದೇಹದಲ್ಲಿ ಒಂದಲ್ಲದಿದ್ದರೂ ಜೀವನದಲ್ಲಿ ಬಹುಮಟ್ಟಿಗೆ ಒಂದು."[5] ಭಾವಗೀತಗಳಿಗೆ ಅನ್ವಯಿಸುವಂತೆ ಹೇಳಲಾಗುವ "ಕ್ಷಣವೊಂದರ ಸ್ಮಾರಕ" ಎಂಬ ಮಾತು ಸಣ್ಣಕತೆಗೂ ಅನ್ವಯವಾಗುತ್ತದೆ. ಸಂಕ್ಷಿಪ್ತತೆಯಿಂದಾಗಿ ಸಣ್ಣಕತೆ ಮತ್ತು ಭಾವಗೀತಗಳೆರಡನ್ನೂ ನಿರ್ವಹಿಸುವುದು ಸುಲಭ ಎಂಬ ಭಾವನೆ ಬೆಳೆದಿದೆ. ಈ ವಿಚಾರವನ್ನು ಪ್ರಸ್ತಾವಿಸುತ್ತಾ ಕೆ. ನರಸಿಂಹಮೂರ್ತಿಯವರು ಮಾಸ್ತಿಯವರನ್ನು ಉದಾಹರಿಸುತ್ತಾರೆ[6]. "ಇವುಗಳನ್ನು ನಡೆಸುವುದಕ್ಕೆ ಬಹಳ ಸನ್ನಾಹ ಬೇಕಿಲ್ಲ; ದೊಡ್ಡ ಕತೆ ದೊಡ್ಡ ಕಾವ್ಯ: ಆನೆಯ ಹಾಗೆ, ಸಣ್ಣಕತೆ ಗೀತಗಳು ಹಾವಿನ ಹಾಗೆ" ದೈತ್ಯ ಪ್ರತಿಭೆಯ ಮಾಸ್ತಿಯವರಿಗೆ ಸಣ್ಣಕತೆಯನ್ನು ನಡೆಸಲು ಹೆಚ್ಚಿನ ಸನ್ನಾಹ ಬೇಕಿಲ್ಲ ಎನಿಸಿದ್ದಿರಬಹುದು. ಎಲ್ಲ ಕತೆಗಾರರೂ ಹೀಗೆ ಭಾವಿಸುವಂತಿಲ್ಲ. ಸಣ್ಣ ಕತೆಯ ರಚನೆಯಲ್ಲಿ ಗೆಲುವು ಪಡೆಯುವುದು ಸುಲಭವಾದ ಮಾತಲ್ಲ.

ಸಣ್ಣಕತೆಯ ಲಕ್ಷಣಗಳನ್ನು ಕುರಿತಂತೆ, ಗಾತ್ರದ ದೃಷ್ಟಿಯಿಂದ ಅದು ಪ್ರಬಂಧ ವನ್ನು ಹೋಲುತ್ತದೆ-ಎಂದು ಹೇಳಬಹುದು. ಆದರೆ ಪ್ರಬಂಧದ ಗಾತ್ರವೂ ಇಷ್ಟೇ ಇರಬೇಕು ಎಂದು ಖಚಿತವಾಗಿ ಹೇಳುವಂತಿಲ್ಲ. ಪತ್ರಿಕೋದ್ಯಮದೊಂದಿಗೆ ಈ ಸಾಹಿತ್ಯ ಪ್ರಕಾರಗಳು ಬೆಳೆದು ಬಂದಿರುವುದರಿಂದ, ಪತ್ರಿಕೆಯ ಕೆಲವು ಪುಟಗಳನ್ನು ತುಂಬಿಸುವಷ್ಟು ಬರವಣಿಗೆ ಈ ಪ್ರಕಾರಗಳಲ್ಲಿರುತ್ತದೆ ಎಂದು ಸ್ಥೂಲವಾಗಿ ಹೇಳ ಬಹುದು. ಹೀಗೆಯೇ, ತೀರ ಸರಳವಾಗಿ ಒಂದು ಕತೆ ಅಥವಾ ಪ್ರಬಂಧವನ್ನು ಅರ್ಧ ಮುಕ್ಕಾಲು ಗಂಟೆಯ ಅವಧಿಯೊಳಗೆ ಓದಿ ಮುಗಿಸುವಂತಿರಬೇಕು ಎಂದೂ ಹೇಳ ಬಹುದು.

ಗಾತ್ರ ಮತ್ತು ವ್ಯಾಪ್ತಿಯ ದೃಷ್ಟಿಯಿಂದ (ಸಣ್ಣಕತೆಗೆ ಹೋಲಿಸಿದಾಗ) ಬಹು ವಿಸ್ತೃತವಾದ ಕಾದಂಬರಿ ಮತ್ತು ಸಣ್ಣಕತೆ ಈ ಎರಡೂ ಸಾಹಿತ್ಯ ರೂಪಗಳ ಶಿಲ್ಪದಲ್ಲಿ (ಸ್ಟ್ರಕ್ಚರ್) ಸಾಮ್ಯವಿದೆ. ಕಾದಂಬರಿಯಲ್ಲಿರುವಂತೆಯೇ ಸಣ್ಣಕತೆಯ ಲ್ಲಿಯೂ ಜೀವನಾನುಭವದ ನೇರವಾದ ಅಭಿವ್ಯಕ್ತಿ ಇರುವುದಿಲ್ಲ. ಅನುಭವವು ಕಥಾ ಸಂವಿಧಾನವಾಗಿ ಮಾರ್ಪಾಡಾಗಿರುತ್ತದೆ. ಕಥಾಸಂವಿಧಾನದ ಪರಿ ಕಲ್ಪನೆಯೇ ವ್ಯಾಪಕವಾದುದಾಗಿದೆ. ನಿರ್ದಿಷ್ಟ ಸಾಹಿತ್ಯದ ಪ್ರಕಾರದ ಕ್ರಿಯೆ ಯೆಲ್ಲವನ್ನೂ ಒಳಗೊಳ್ಳುವಂತಹುದಾಗಿದೆ ಈ ಪರಿಕಲ್ಪನೆ. ಸ್ಥೂಲವಾಗಿ ಹೇಳುವು ದಾದರೆ, ಕತೆಯಲ್ಲಿನ ಘಟನೆಗಳ ಸರಣಿ ಮತ್ತು ಇದನ್ನು ಒಟ್ಟಾಗಿ ಕಟ್ಟುವ ತತ್ವಗಳೇ

---

5 ಕೆ. ನರಸಿಂಹಮೂರ್ತಿ. ಕನ್ನಡ ಸಣ್ಣಕತೆಯ ಸ್ವರೂಪ, ಪ್ರಬುದ್ಧ ಕರ್ಣಾಟಕ ಸಂಪುಟ 21 ಸಂಚಿಕೆ 21 ಪು. 11

6 ಅದೇ ಪು. 12

ಕಥಾ ಸಂವಿಧಾನ.[7] ಈ ಕಟ್ಟುವಿಕೆ ಅಥವಾ ಬಂಧದಿಂದಾಗಿ ನಿರ್ದಿಷ್ಟವಾದ ಕಲಾತ್ಮಕ ಮತ್ತು ಭಾವನಾತ್ಮಕ ಪರಿಣಾಮಗಳುಂಟಾಗುತ್ತವೆ. ಕಥಾ ಸಂವಿಧಾನವು ವ್ಯವಸ್ಥೆಗೊಳಪಡಿಸಿದ ಕ್ರಿಯೆಯಾಗಿದೆ. ಕ್ರಿಯೆ ಸಂಭವಿಸುವುದು ಕಾಲದಲ್ಲಿ. ಹೀಗೆ ಕಥಾ ಸಂವಿಧಾನದ ಪರಿಕಲ್ಪನೆ, ಕಾಲ ಕಾರ್ಯಕಾರಣ ಸಂಬಂಧಗಳೆಲ್ಲವನ್ನೂ ಒಳಗೊಳ್ಳುವಷ್ಟು ವ್ಯಾಪಕವಾದುದಾಗಿದೆ. ಕತೆ, ಕಾದಂಬರಿ ಮತ್ತು ನಾಟಕದಲ್ಲಿ ಘಟನೆಗಳನ್ನೂ ಮತ್ತು ಕ್ರಿಯೆಯನ್ನೂ ಶಿಸ್ತಿಗೆ ಒಳಪಡಿಸಿ ಕಥಾ ಸಂವಿಧಾನವನ್ನು ನಿರ್ಮಿಸುವುದರಿಂದ ಕೆಲವು ಲಾಭಗಳಿವೆ. ಮೊದಲನೆಯದಾಗಿ, ನಿರೂಪಿತವಾದ ಘಟನೆಗಳಲ್ಲಿಯೇ ಓದುಗನ ಗಮನ ಸಂಪೂರ್ಣವಾಗಿ ಕೇಂದ್ರೀಕೃತವಾಗುವುದಿಲ್ಲ. ಕೃತಿಯಲ್ಲಿ ನಿರೂಪಿತವಾಗಿರುವ ಘಟನೆಗಳ ಆಚೆಗಿರುವ ಅನುಭವದ ಆಂದೋಲನವನ್ನೂ ಗ್ರಹಿಸಿಕೊಳ್ಳುವುದು ಓದುಗನಿಗೆ ಸಾಧ್ಯವಾಗುತ್ತದೆ. ಕಥಾ ಸಂವಿಧಾನವನ್ನು ನಿರ್ಲಕ್ಷಿಸಿಯೋ ಅಥವಾ ಸಂವಿಧಾನದ ಚೌಕಟ್ಟನ್ನು ಉದ್ದೇಶಪೂರ್ವಕವಾಗಿಯೇ ಒಡೆದು ಹಾಕಿಯೋ, ಕೇವಲ ಪಾತ್ರಗಳ ನೆರವಿನಿಂದ ಸನ್ನಿವೇಶವೊಂದನ್ನು ಪುನಾರಚಿಸುವ ಸಲುವಾಗಿಯೇ ಭಾಷೆಯನ್ನು ಬಳಸುವುದು ಈಚಿನ ಪ್ರಯೋಗಗಳಲ್ಲಿ ಕಾಣಿಸುತ್ತದೆ. ಕನ್ನಡದ ಕೆಲವು ನವ್ಯ ಕತೆಗಳು ಈ ಮಾದರಿಯನ್ನು ಅನುಸರಿಸುತ್ತವೆ. ಇವೂ ಸಣ್ಣಕತೆಗಳೇ ಆದರೂ ಇಲ್ಲಿ ಲೇಖಕನು ಆರಂಭ–ಬೆಳವಣಿಗೆ–ಮುಕ್ತಾಯಗಳ ಚೌಕಟ್ಟನ್ನು ನಾಶಪಡಿಸುತ್ತಾನೆ ಅಥವಾ ಈ ಚೌಕಟ್ಟನ್ನು ಲೆಕ್ಕಿಸುವುದಿಲ್ಲ, ಅನುಭವದ ನಿರೂಪಣೆ ಇರುವುದಿಲ್ಲ. ಕತೆಯನ್ನು ಒಂದು ನೈತಿಕ ಮತ್ತು ಭಾವನಾತ್ಮಕ ಶೋಧನೆಯಾಗಿಸುವ ಪ್ರಯತ್ನವಿರುತ್ತದೆ. ಈ ಬಗೆಯ ಪ್ರಯತ್ನಗಳಲ್ಲಿ "ಅನುಭವವೇ ತನ್ನ ಆಳ ವಿಸ್ತಾರಗಳನ್ನು ಹುಡುಕಿಕೊಳ್ಳುತ್ತ ಒಂದು ರೂಪು ಪಡೆದುಕೊಳ್ಳುತ್ತದೆ[8] " ಎಂಬ ನಿರೀಕ್ಷೆಯಿರುತ್ತದೆ.

ನಿರೂಪಕ ಮತ್ತು ಶ್ರೋತೃ ಇಲ್ಲದೆ ಕತೆಯಿಲ್ಲ. ಪ್ರಾಚೀನ ಕಥಾಪರಂಪರೆಯಲ್ಲಿ ನಿರೂಪಕನಿಗೂ ಕತೆಯ ಘಟನೆ ಸನ್ನಿವೇಶ ಮತ್ತು ಪಾತ್ರಗಳಿಗೂ ಯಾವುದೇ ಸಂಬಂಧವಿರುವುದಿಲ್ಲ. ಆಧುನಿಕ ಸಣ್ಣಕತೆಯ ಮೊದಲ ಹಂತಗಳಲ್ಲಿ ನಿರೂಪಕ ಕತೆಯಲ್ಲಿ ಒಂದು ಪಾತ್ರವಾಗಿ ಕಾಣಿಸಿಕೊಳ್ಳುವುದುಂಟು. ನಿರೂಪಣೆ ಸದಾ ಕಾಲವೂ ಓದುಗನನ್ನು (ಕೇಳುವವನನ್ನು) ದೃಷ್ಟಿಯಲ್ಲಿರಿಸಿಕೊಂಡೇ ಸಾಗುತ್ತದೆ. ನವ್ಯ ಕತೆಗಳಲ್ಲಿ ನಿರೂಪಕನು ಕತೆಯ ಘಟನೆಗಳಲ್ಲಿ ಪೂರ್ತಿ ತಲ್ಲೀನನಾಗುವುದುಂಟು. ಓದುಗನ ಪರಿವೆಯೇ ತನಗಿಲ್ಲವೆಂಬಂತೆ ಸನ್ನಿವೇಶವನ್ನು ನಿರೂಪಿಸುತ್ತಾ ಹೋಗಬಹುದು. ಇಂತಹ ಕತೆಗಳು ನಾಟಕೀಯ ಸ್ವಗತದ ರೂಪವನ್ನು ಪಡೆದುಕೊಳ್ಳುತ್ತವೆ.

---

7 ವಿವರಗಳಿಗೆ ನೋಡಿ. ಎಲಿಜಬೆತ್ ಡಿಪ್ಲ್ – ಪ್ಲಾಟ್. ಪ್ರ. ಸಂ. ಜಾನ್ ಡಿ. ಜಂಪ್. ದಿ ಕ್ರಿಟಿಕಲ್ ಈಡಿಯಂ ಮೆಥುಯಿನ್ ಅಂಡ್ ಕಂ. ಲಿ. 1970 ಪು. 3 ಮತ್ತು 25

8: ಪಿ. ಲಂಕೇಶ್ : ಪ್ರಸ್ತುತ. ಅಕ್ಷರ ಪ್ರಕಾಶನ. ಸಾಗರ. ಪು. 78 ರಿಂದ 84

### ಕಥಾಪರಂಪರೆ ಮತ್ತು ಕನ್ನಡ ಸಣ್ಣಕತೆ

ಜಗತ್ತಿನ ಕಥಾ ಪರಂಪರೆ ಬಹು ಪ್ರಾಚೀನವಾದುದು. "ಪ್ರಪಂಚದ ಮೊದಲ ಕಥಾ ಬರಹ ಕ್ರಿ. ಪೂ. 2000ದಲ್ಲಿ ಸಿದ್ಧವಾಯಿತು ಬ್ಯಾಬಿಲೋನಿಯಾದಲ್ಲಿ. ಹೆಸರು 'ಎಪಿಕ್ ಆಫ್ ಗಿಲ್ಗಮೇಶ್'. ಕ್ರಿ. ಪೂ. 500ರಲ್ಲಿ ಜಾತಕ ಕತೆಗಳೂ, ಪಂಚತಂತ್ರದ ಕತೆಗಳೂ ಅನಂತರ ಕಥಾಸರಿತ್ಸಾಗರವೂ ಭಾರತದಲ್ಲಿ ಹುಟ್ಟಿದವು. ಈ ಕತೆಗಳು ಭಾಷಾಂತರಗೊಂಡು ಜಗತ್ತಿನೆಲ್ಲೆಡೆ ಸಂಚರಿಸಿದುವು[9]. ಕನ್ನಡವಲ್ಲಿ ವಡ್ಡಾರಾಧನೆಯಿಂದ ಮೊದಲಾಗಿ, ಚಾವುಂಡರಾಯ ಪುರಾಣ, ದುರ್ಗಸಿಂಹನ ಪಂಚತಂತ್ರ, ಧರ್ಮಾಮೃತ, ಅಭಿನವ ದಶಕುಮಾರ ಚರಿತೆ ಮೊದಲಾದ ಕೃತಿಗಳಲ್ಲಿ ಬೆಳೆದು ಬಂದಿರುವ ಶಿಷ್ಟ ಕಥಾ ಪರಂಪರೆಯಿದೆ. ಜಾನಪದ ಕತೆಗಳ ಶ್ರೀಮಂತ ಭಾಂಡಾಗಾರ ವಿದೆ. ಮುಖ್ಯವಾದ ಪ್ರಶ್ನೆಯೆಂದರೆ ಈ ಕಥಾ ಪರಂಪರೆಗೂ ಆಧುನಿಕ ಸಣ್ಣ ಕತೆಗಳಿಗೂ ಏನಾದರೂ ಸಂಬಂಧವಿದೆಯೋ ಎಂಬುದು. ಈ ವಿಚಾರದಲ್ಲಿ ವಿಭಿನ್ನವಾದ ತೀರ್ಮಾನಗಳು ವ್ಯಕ್ತವಾಗಿವೆ.

"ಸಣ್ಣ ಕತೆ ಪರದೇಶದ ಸಸಿ[10]." "ಸಣ್ಣ ಕಥೆಯು ನಮಗೆ ಇಂಗ್ಲಿಷಿನಿಂದ ಬಂದಿತೆಂಬುದರಲ್ಲಿ ಸಂದೇಹವಿಲ್ಲ. ಅವು ನಮ್ಮಲ್ಲಿಯೇ ಹುಟ್ಟಿ ನಮ್ಮಲ್ಲಿಯೇ ಬೆಳೆದುವು ಎಂದು ಹೇಳ ಬಯಸುವ ಕೆಲವರು ನಯಸೇನನ ಈ ಕಥೆಗಳನ್ನು ಬೆರಳಿಟ್ಟು ತೋರಿಸುತ್ತಾರೆ. ಈ ಕಥೆಗಳು ಚಿಕ್ಕವಾಗಿವೆ ಎಂಬರ್ಥದಲ್ಲಿ ಮಾತ್ರ ಇವು ಸಣ್ಣ ಕಥೆಗಳು, ಆಧುನಿಕ ಸಾಹಿತ್ಯದ ಸಣ್ಣ ಕಥೆಗಳಿಗೂ ಇವಕ್ಕೂ ಯಾವ ಸಾಮ್ಯವೂ ಇಲ್ಲ. ಇವೆರಡರ ರೀತಿ ಬೇರೆ ಬೇರೆ[11]." "ಕನ್ನಡ ಕಥಾ ಪರಂಪರೆಯನ್ನು ಕುರಿತು ಮಾತನಾಡುವಾಗ, ಪಾಶ್ಚಾತ್ಯ ಪ್ರಭಾವದಿಂದ ರೂಪಿತವಾದ 'ಸಣ್ಣಕತೆ'ಯೆಂಬು ಸಾಹಿತ್ಯ ಪ್ರಕಾರದ ಹುಟ್ಟು ಬೆಳವಣಿಗೆಗೂ ವಡ್ಡಾರಾಧನೆಯಿಂದಲೇ ಬೆಳೆದುಕೊಂಡು ಬಂದಿರುವ ಕನ್ನಡ ಕಥನ ಸಾಹಿತ್ಯ ಪರಂಪರೆಗೂ ಇರುವ ವ್ಯತ್ಯಾಸವನ್ನು ಗಮನಿಸಬೇಕು. ತಮ್ಮ ಕಥೆಗಳಿಗೆ ಸ್ಟ್ರೇಂಡ್ ಮೆಗಸಿನ್‌ನಂತಹ ಕಡೆ ಬರುತ್ತಿದ್ದ ಕತೆಗಳೇ ಪ್ರೇರಕವಾದುವೆಂದು ಮಾಸ್ತಿಯವರೇ ಹೇಳುತ್ತಾರೆ.......................................
ಅವರು ಹಳಗನ್ನಡ ಮತ್ತು ನಡುಗನ್ನಡ ಕವಿಗಳಿಂದ ಪಡೆದುಕೊಂಡ ಸಂಗತಿಗಳು ಸಾಕಷ್ಟಿದ್ದುವು[12]."

---

9 ಡಾ|| ಅನುಪಮಾ ನಿರಂಜನ. ಪೂರ್ವೋಕ್ತ. ಪು. 34
10 ಕೆ. ನರಸಿಂಹಮೂರ್ತಿ, ಪೂರ್ವೋಕ್ತ ಪು. 33
11 ಜಿ. ವೆಂಕಟಸುಬ್ಬಯ್ಯ, ನಯಸೇನ. ಮೈಸೂರು ವಿ. ವಿ. ಪು. 58
12 ಎಚ್. ಎಸ್. ರಾಘವೇಂದ್ರರಾವ್ : ನಿಲುವು – ಕನ್ನಡ ಸಂಘ ಕ್ರೈಸ್ಟ್ ಕಾಲೇಜ್ ಪು. 244–245

"ಪಶ್ಚಿಮದ ಸಣ್ಣಕತೆ ನಮ್ಮಲ್ಲಿಗೆ ಬಂದಾಗ ಅದು ಅಲ್ಲಿಯ ಪೂರ್ಣ ಅನುಕರಣೆಯಾಗಿ, ನಮ್ಮಲ್ಲಿ ಕತೆಗಳ ಒಂದು ಪರಂಪರೆಯೇ ಇರಲಿಲ್ಲವೆಂಬಂತೆ ತೀರಾ ಹೊಸದಾಗಿಯೇ ಬರಲಿಲ್ಲವೆಂಬುದು ಕೂಡ ಅಷ್ಟೇ ಮುಖ್ಯವಾದ ಅಂಶವಾಗಿದೆ. ಹೊಸ ಸಾಹಿತ್ಯ ಪ್ರಕಾರವೊಂದನ್ನು ಆಮದು ಮಾಡಿಕೊಳ್ಳುವಾಗ ಅದರ ಕೆಲವೊಂದು ಗುಣಧರ್ಮಗಳನ್ನು ನಮ್ಮ ಕಥಾ ಪರಂಪರೆಯಲ್ಲಿ ಗುರುತಿಸುವ, ನಮ್ಮ ಕಥಾ ಪರಂಪರೆಗೆ ವಿಶಿಷ್ಟವಾದ ಕೆಲವು ಅಂಶಗಳನ್ನು ಹೊಸ ಕಥೆಯಲ್ಲಿ ಅಳವಡಿಸಿಕೊಳ್ಳುವ ಮಹತ್ವದ ಕೆಲಸವೂ ಆ ಕಾಲದಲ್ಲಿ ನಡೆಯಿತು..................................ಈ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವಹಿಸಿದವರು ಮಾಸ್ತಿಯವರು[13]"

ಮೇಲೆ ಅಭಿಪ್ರಾಯಗಳನ್ನು ಪರಿಶೀಲಿಸಿದರೆ, ಹೊಸ ಸಣ್ಣಕತೆಗಳಿಗೂ ಕನ್ನಡದ ಕಥಾ ಪರಂಪರೆಗೂ ಯಾವ ಸಂಬಂಧವೂ ಇಲ್ಲ ಎಂಬ ವಿಚಾರಧಾರೆ ಕಾಲಕ್ರಮದಲ್ಲಿ ಪರಿವರ್ತಿತವಾಗಿ ಆಧುನಿಕ ಸಣ್ಣಕತೆಯು ಪರಂಪರೆಯಿಂದ ಪಡೆದುಕೊಂಡಿರುವ ಅಂಶಗಳೂ ಸಾಕಷ್ಟಿವೆ ಎಂಬ ನೆಲೆಗೆ ಮುಟ್ಟಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಇದೇ ವಿಚಾರವನ್ನು ಮುಂದುವರಿಸಿ ಆಧುನಿಕ ಸಣ್ಣಕತೆಯ ಬೆಳವಣಿಗೆಗೆ ಇಂಗ್ಲಿಷಿನಿಂದ ದೊರೆತದ್ದು ಪ್ರೇರಣೆ ಮಾತ್ರ. ತನ್ನ ಬೆಳವಣಿಗೆಯ ಮೊದಲ ಹಂತಗಳಲ್ಲಿ ಕನ್ನಡ ಕತೆಯು ಹೊರಗಿನಿಂದ ಸ್ವೀಕರಿಸಿರುವ ಪೋಷಕಾಂಶಗಳಿಗಿಂತಲೂ, ಕನ್ನಡ ಸಾಹಿತ್ಯ ಪರಂಪರೆಯಿಂದ ಸ್ವೀಕರಿಸಿರುವ ಅಂಶಗಳೇ ಬಲವತ್ತರವಾದವುಗಳಾಗಿವೆ. ಹೊಸಗನ್ನಡ ಸಣ್ಣಕತೆಯ ಬೇರುಗಳು ಕನ್ನಡದ ಕಥಾ ಪರಂಪರೆಯಲ್ಲಿಯೇ ಹುದುಗಿವೆ ಎಂದು ತೋರಿಸಿಕೊಡಬಹುದಾಗಿದೆ. ಈ ವಿಚಾರವನ್ನು ಮುಂದುವರಿಸುವ ಮೊದಲು ಸಾಹಿತ್ಯದ ಸ್ವರೂಪವನ್ನು ಕುರಿತಂತೆಯೂ, ಸಾಹಿತ್ಯದ ಪ್ರಕಾರಗಳು ಏಕೆ ಬೇರೆಯಾಗುತ್ತವೆ ಎಂಬ ಬಗೆಗೂ ಕೆಲವು ವಿಚಾರಗಳನ್ನು ಗಮನಿಸಬಹುದಾಗಿದೆ.

ಸಾಹಿತ್ಯ ಸೃಷ್ಟಿಯಲ್ಲಿ ಮುಖ್ಯವಾದುದು, ಒಂದು ತುದಿಯಲ್ಲಿರುವ ಭಾಷೆ ಮತ್ತು ಮತ್ತೊಂದು ತುದಿಯಲ್ಲಿರುವ ಅನುಭವಗಳ ಸೆಣಸಾಟ ಹಾಗೂ ಹೊಂದಾಣಿಕೆ. ಈ ವಿಚಾರವನ್ನು ಕೆ. ಎಸ್. ನರಸಿಂಹಸ್ವಾಮಿಯವರು ಕಾವ್ಯದ ಭಾಷೆಯಲ್ಲಿ ಸೊಗಸಾಗಿ ಹೇಳಿದ್ದಾರೆ—

ಆಳದನುಭವವನ್ನು ಮಾತು ಕೈಹಿಡಿದಾಗ
ಕಾವು ಬೆಳಕಾದಾಗ ಒಂದು ಕವನ
(ಕವನ ಹುಟ್ಟುವ ಸಮಯ : ತೆರೆದ ಬಾಗಿಲು)

---

13 ಗಿರಡ್ಡಿ ಗೋವಿಂದರಾಜ: ಕನ್ನಡ ಕಥಾ ಪರಂಪರೆ ಮತ್ತು ಮಾಸ್ತಿ. ಪ್ರ.ಸಂ.. ಜಿ.ಎಸ್. ಶಿವರುದ್ರಪ್ಪ. ಮಾಸ್ತಿಯವರ ಸಾಹಿತ್ಯ ಸಾಧನೆ. ಬೆಂಗಳೂರು ವಿ.ವಿ. ಪು. 25

ಕಾವು ಬೆಳಕಾಗುವ ವಿಚಾರವು ಕಾವ್ಯದಲ್ಲಿ ಅಂತರ್ಗತವಾಗುವ ಅನುಭವಗಳುಹೊಂದುವ ರೂಪಾಂತರವನ್ನು ಕುರಿತದ್ದಾಗಿ ಸದ್ಯಕ್ಕೆ ಆ ವಿಚಾರವನ್ನು ಕೊಂಚ ದೂರವಿಡಬೇಕಾಗುತ್ತದೆ. 'ಅನುಭವ' ಮತ್ತು 'ಮಾತು'ಗಳು ಕೈಹಿಡಿವ ಕ್ರಿಯೆಯು ಸಾಹಿತ್ಯಾಭಿವ್ಯಕ್ತಿಯ ವಿಧಿ ವಿಧಾನಗಳನ್ನು ಕುರಿತದ್ದಾಗಿದ್ದು ಇಲ್ಲಿ ಪ್ರಸ್ತುತವಾಗಿದೆ. ಕವನ ಮಾತ್ರವಲ್ಲ ಕತೆ, ಕಾದಂಬರಿ, ನಾಟಕಗಳೆಲ್ಲವೂ ಹುಟ್ಟುವುದು ಹೀಗೆಯೆ. ಈ ಕೈ ಹಿಡಿವ ಕ್ರಿಯೆ ಸಾಂದರ್ಭಿಕವಲ್ಲ. ಸ್ವತಂತ್ರವಾದ ಮಾತು ಮತ್ತು ಅಮೂರ್ತವಾದ ಅನುಭವಗಳು ಯಾವುದೋ ಒಂದು ಬಂಧಕ್ಕೆ ಪೂರ್ಣಬದ್ಧವಾಗುವಂತಹ ಕ್ರಿಯೆಯಿದು. ಈ ಸಂಬಂಧದಲ್ಲಿ ಅಭಿವ್ಯಕ್ತಿಯ ವಿಧಿ ವಿಧಾನಗಳು ಬದಲಾದಂತೆಯೂ ಬರಹಗಾರರು ಅನುಭವಗಳನ್ನು ಗ್ರಹಿಸಿಕೊಳ್ಳುವ ರೀತಿಯಲ್ಲಿಯೇ ಸೇರಿಹೋಗಿರುವ ವೈವಿಧ್ಯದಿಂದಲೂ ಸಾಹಿತ್ಯ ಪ್ರಕಾರಗಳು ಬೇರೆ ಬೇರೆಯಾಗುತ್ತವೆ. ಈ ಹಿನ್ನೆಲೆಯಲ್ಲಿ ಸಾಹಿತ್ಯ ಪ್ರಕಾರಗಳ ಉಗಮ ಮತ್ತು ವಿಕಾಸಗಳಿಗೆ ಸಂಬಂಧಿಸಿದಂತೆ ಮಂಡಿಸಲಾಗಿರುವ ಕೆಲವು ಸಿದ್ಧಾಂತಗಳನ್ನು ಸ್ಥೂಲವಾಗಿ ಗಮನಿಸಬಹುದಾಗಿದೆ.

ಶಿಷ್ಟ ಸಾಹಿತ್ಯಕ್ಕೂ ಹಿಂದಿನ, ಅಸಾಹಿತ್ಯಕವೆನ್ನಬಹುದಾದ ಮಾತಿನ ರೂಪಗಳಲ್ಲಿಯೇ ಸಾಹಿತ್ಯ ಪ್ರಕಾರಗಳ ಮೂಲವನ್ನು ಅನ್ವೇಷಿಸಬೇಕೆಂದು ಆಂದ್ರೆ ಜೋಲ್ (Andre Jolles) ಎಂಬವನ ವಾದ. ಐತಿಹ್ಯ, ಕತೆ, ಗಾದೆ, ಸ್ಮೃತಿಚಿತ್ರ, ದಂತಕತೆ, ನಗೆಹನಿ ಮೊದಲಾದುವುಗಳನ್ನು ಇವನು ಸಾಹಿತ್ಯಪೂರ್ವ ರೂಪಗಳು ಎಂದು ಗುರುತಿಸುತ್ತಾನೆ. ಮಾತಿನ ಮೂಲಭೂತ ಸನ್ನಿವೇಶಗಳಿಗೆ ಈ ರೂಪಗಳು ಹೊಂದಿಕೊಳ್ಳುತ್ತವೆ ಎನ್ನಲಾಗಿದೆ. ಪ್ರತಿಭಾನ್ವಿತ ಲೇಖಕರ ವೈಯಕ್ತಿಕ ಸಾಧನೆಯ ಫಲವಾಗಿ ಸಾಹಿತ್ಯ ಪ್ರಕಾರಗಳು ಹುಟ್ಟುತ್ತವೆ ಮತ್ತು ಬದಲಾಗುತ್ತವೆ ಎಂಬುದು ಇನ್ನೊಂದು ವಾದ. ಈ ವಾದದಂತೆ ಪ್ರತಿಯೊಂದು ಸಾಹಿತ್ಯ ಪ್ರಕಾರಕ್ಕೂ ಒಬ್ಬ ಮೂಲ ಪುರುಷನಿರುತ್ತಾನೆ. ಈ ವಾದವನ್ನು ಒಪ್ಪಿಕೊಂಡರೂ ವೈಯಕ್ತಿಕ ಸಾಧನೆಗೆ ಸಾಮೂಹಿಕ ಪ್ರಯತ್ನಗಳ ಹಿನ್ನೆಲೆ ಇರುವುದನ್ನು ನಿರಾಕರಿಸಲಾಗುವುದಿಲ್ಲ. ಒಂದು ಅಥವಾ ಹಲವು ಹಳೆಯ ಸಾಹಿತ್ಯ ಪ್ರಕಾರಗಳ ರೂಪಾಂತರ, ಮಿಶ್ರಣ ಮತ್ತು ಹೊಂದಾಣಿಕೆಗಳಿಂದ ಹೊಸ ಹೊಸ ಸಾಹಿತ್ಯ ಪ್ರಕಾರಗಳುದಿಸುತ್ತವೆ ಎಂದು ಕೊಡರೊವ್ ಎಂಬವನ ವಾದ[14].

"ಸಣ್ಣಕತೆ ಅಮೆರಿಕದ ಶೋಧ ಮತ್ತು ಅಲ್ಲಿಯೇ ಅದು ಅತ್ಯಂತ ವೈಶಿಷ್ಟ್ಯ

---

14. ಅಲಸ್ಟೇರ್ ಫೌಲರ್ – ಕೈಂಡ್ಸ್ ಆಫ್ ಲಿಟರೇಚರ್.
ಕ್ಲಾರೆಂಡನ್ ಪ್ರೆಸ್ – ಆಕ್ಸ್‌ಫರ್ಡ್ 1982, ಪು. 151 ಮತ್ತು 158

ಪೂರ್ಣ ಸಾಹಿತ್ಯ ಪ್ರಕಾರವಾಗಿ ಉಳಿದಿದೆ."[15] ಅಮೆರಿಕದ ಸಂಯುಕ್ತ ಸಂಸ್ಥಾನಗಳ ರಾಷ್ಟ್ರೀಯ ಸಾಹಿತ್ಯ ರೂಪವಿದು. ಒಂದು ಕಲಾ ಪ್ರಕಾರವಾಗಿ ಸಣ್ಣ ಕತೆಯ ಸಾಧ್ಯತೆಗಳನ್ನು ಗುರುತಿಸಿಕೊಂಡ ಶ್ರೇಯಸ್ಸು ಎಡ್ಗರ್ ಅಲನ್ ಪೋಗೆ ಸಲ್ಲಬೇಕು–ಎಂಬಂತಹ ಆಲೋಚನೆಗಳನ್ನೂ, ಐತಿಹಾಸಿಕವಾಗಿ ಅಲ್ಲದಿದ್ದರೂ ವಸ್ತುತಃ ಮಾಸ್ತಿಯವರು ಕನ್ನಡ ಸಣ್ಣ ಕತೆಯ ಜನಕ ಎಂಬ ವಿಚಾರವನ್ನೂ ಒಂದು ಸಾಹಿತ್ಯ ಪ್ರಕಾರಕ್ಕೆ ಒಬ್ಬ ಮೂಲ ಪುರುಷ ಎನ್ನುವ ವಾದದ ಹಿನ್ನೆಲೆಯಲ್ಲಿಯೆ ಗ್ರಹಿಸಬೇಕಾಗುತ್ತದೆ. ಆದರೆ ಅಮೆರಿಕನ್ ಮೂಲದಲ್ಲಿ ಕೂಡ ಸಣ್ಣಕತೆ ಪರಂಪರಾಗತ ಮತ್ತು ಜಾನಪದ ಕತೆಗಳ ರೂಪಾಂತರವೇ ಆಗಿದೆ. ವಾಷಿಂಗ್ಟನ್ ಇರ್ವಿಂಗ್‌ನ 'ರಿಪ್ ವ್ಯಾನ್ ವಿಂಕಲ್' ಕತೆ ಜಾನಪದ ಕತೆಗಳನ್ನು ನೆನಪಿಗೆ ತರುವುದಿಲ್ಲವೆ? 'ಪೋ'ನ ಕತೆಗಳಲ್ಲಿಯೂ ಕೌತುಕದ ಘಟನೆಗಳಿಗೆ ಪ್ರಾಮುಖ್ಯ ದೊರೆಯುವುದು ಸರ್ವವಿದಿತ. ಜಾನಪದ ಕತೆಯಲ್ಲಿ ಕೌತುಕದ ಘಟನೆಗಳು ಓದುಗನ ಕಾಲದೇಶಗಳಿಗೆ ದೂರವಾದ ನೆಲೆಯಲ್ಲಿ ಸಂಭವಿಸಿದರೆ 'ಪೋ'ನ ಕತೆಯ ಕೌತುಕಗಳು ಸಾಮಾಜಿಕ ಸಂದರ್ಭದಲ್ಲಿ ವರ್ತಮಾನದ ನೆಲೆಯಲ್ಲಿಯೇ ಸಂಭವಿಸುತ್ತವೆ.

ವಡ್ಡಾರಾಧನೆಯ, ಧರ್ಮಾಮೃತದ ಕತೆಗಳು ತಾಂತ್ರಿಕ ದೃಷ್ಟಿಯಿಂದ ಸಣ್ಣ ಕತೆಗಳೇ ಆಗಿವೆ. ಸಂಕ್ಷಿಪ್ತತೆ, ಪರಿಣಾಮ ರಮಣೀಯತೆಗಳೆ ಇಲ್ಲಿನ ಕತೆಗಳ ಲಕ್ಷಣವೂ ಆಗಿದೆ. ಸಹಜವಾಗಿಯೆ ಈ ಕೃತಿಗಳ ಲೇಖಕರ ಉದ್ದೇಶಗಳು ಆಧುನಿಕ ಕತೆಗಾರರ ಉದ್ದೇಶಗಳಿಗಿಂತ ವಿಭಿನ್ನವಾಗಿವೆ. ಹಾಗೆಯೇ ಹಳಗನ್ನಡದ ಅತಿ ವಿಶಿಷ್ಟ ಸಾಹಿತ್ಯ ಪ್ರಕಾರವಾಗಿರುವ ಚಂಪೂ ಕಾವ್ಯಗಳಲ್ಲಿ ಅಭಿವ್ಯಕ್ತಿ ವಿಧಾನದ ದೃಷ್ಟಿಯಿಂದ ಸಣ್ಣ ಕತೆಗಳೆ ಎಂದು ತೋರಿಸಿಕೊಡಬಹುದಾದ ಭಾಗಗಳಿವೆ. ನಿದರ್ಶನಕ್ಕಾಗಿ ಒಂದೆರಡು ಭಾಗಗಳನ್ನು ವಿಶ್ಲೇಷಿಸಬಹುದು: ಪಂಪ ಭಾರತದ ಎಂಟನೆಯ ಆಶ್ವಾಸದಲ್ಲಿ, ದುರ್ಯೋಧನನ ಪುರೋಹಿತನಾದ ಕನಕ ಸ್ವಾಮಿಯು ವಾಮಾಚಾರವನ್ನಾಶ್ರಯಿಸಿ ಯಜ್ಞಕುಂಡದಲ್ಲಿ ಸೃಜಿಸಿದ ಕೀರ್ತಿಗೆಯು, ಅವನ ಆದೇಶದಂತೆ ಪಾಂಡವರನ್ನು ತಿನ್ನಲು ಹೋಗುತ್ತಾಳೆ. ಆ ಹೊತ್ತಿಗಾಗಲೆ ಪಾಂಡವರ ಪ್ರಾಣಗಳನ್ನು ಅಪಹರಿಸಿದ್ದ ಯಮನು ಕೀರ್ತಿಗೆಯನ್ನು ಬೆದರಿಸುವುದಲ್ಲದೆ, ಜಾತಿ ದೇವತೆಯಾಗಿದ್ದರೆ ತನ್ನ ಎಂಜಲನ್ನು ತಿನ್ನದೆ, ಕನಕನನ್ನೆ ತಿನ್ನುವಂತೆ ಮರು ಆದೇಶ ನೀಡುತ್ತಾನೆ. "ಕನಕನ ಬೇಳ್ವೆ ತಗುಳ್ದುದು ಕನಕನಂ" ಎಂಬ ಮಾತು ಜಗದ್ವಿಖ್ಯಾತವಾಗುವಂತೆ ಕನಕನು ನಾಶವಾಗುತ್ತಾನೆ. ಮಹಾಭಾರತದ ಕತೆಯ ನಡುವೆ ಪ್ರತ್ಯೇಕವಾಗಿ ನಿಲ್ಲುವ ಈ

---

15 ಸಂ. ವ್ಯಾಲೆಸ್ ಮತ್ತು ಮೇರಿ ಸ್ಟೆಗ್ನರ್–ಗ್ರೇಟ್ ಅಮೆರಿಕನ್ ಶಾರ್ಟ್ ಸ್ಟೋರೀಸ್ ಡೆಲ್ ಪಬ್ಲಿಷಿಂಗ್ ಕಂ. ನ್ಯೂಯಾರ್ಕ್-1957, ಪೃ. 1

ನಿರೂಪಣೆಯಲ್ಲಿ ಸಣ್ಣ ಕತೆಯ ಸಂಕ್ಷಿಪ್ತತೆ, ಬಿಗುವು, ಆಶಯಗಳು ಸುವ್ಯಕ್ತ ವಾಗಿವೆ.

ರುದ್ರಭಟ್ಟನ ಒಂದು ಪದ್ಯವಿದು.

ಕತೆಯಂ ಕೇಳಿಲೆ ಕಂದ ಹುಂ ರಘುಜನೆಂಬಂ ಹುಂ ಸಕಾಂತಂ ವನ
ಸ್ಥಿತನಾದಂ ಗುರು ಪೇಳಿಜೆ ಹುಂ ದಶಶಿರಂ ಕೊಂಡುಯ್ದನಾ ರಾಮನಾ
ಸತಿಯಂ ತಾನೆನೆ ಪೂರ್ವಮಂ ನೆನೆಯುತುಂ ಹುಂ ಕೊಳ್ಳದುತ್ಕೋಪಹುಂ
ಕೃತಿಯಂ ಮಾಡುತುವಶೌಂಡುಗರ್ಚಿ ಕಿಸುಗಣ್ಣಿಟ್ಟಚ್ಯುತಂ ರಂಜಿಕುಂ
(ರುದ್ರಭಟ್ಟ: ಜಗನ್ನಾಥ ವಿಜಯ. ತೃತೀಯಾಶ್ವಾಸ, ಪ. 68)

ಈ ವೃತ್ತದಲ್ಲಿ ರಾಮಾಯಣದ ಅರ್ಧ ಕತೆಯನ್ನು ಎರಡು ಸಾಲುಗಳಲ್ಲಿ ಸಂಗ್ರಹಿಸುವಾಗ ಕಂಡುಬರುವ ಸಂಕ್ಷಿಪ್ತ ಅಭಿವ್ಯಕ್ತಿ: ಅವತಾರದ ಪರಿಕಲ್ಪನೆಯ ನೆರ ವನ್ನು ಪಡೆದು ಕತೆಯ ಕ್ರಿಯೆಯನ್ನು ಒಂದು ಯುಗದಿಂದ ಮತ್ತೊಂದು ಯುಗಕ್ಕೆ ಜಾರಿಸುವ ಜಾಣ್ಮೆ: ವೃತ್ತದ ಶ್ರೋತೃವೇ ನಾಯಕನಾಗಿ ವಿಜೃಂಭಿಸಿದಾಗ ಉಂಟಾ ಗುವ ಆಘಾತ; ನಿರೂಪಿತವಾದ ಘಟನೆಯು ಪಡೆದುಕೊಳ್ಳುವ ಅನಿರೀಕ್ಷಿತ ತಿರುವು ಮತ್ತು ಮುಕ್ತಾಯ ಈ ಸರಕುಗಳೆಲ್ಲವೂ ಆಧುನಿಕ ಸಣ್ಣ ಕತೆಯದೆ ಆಗಿದೆಯಲ್ಲವೆ? ಪಂಪನ ಆದಿ ಪುರಾಣದ ವಿಜಯ ಪ್ರಶಸ್ತಿಯ ವೃತ್ತ. ಹರಿಹರನ ನಂಬಿಯಣ್ಣನ ರಗಳೆಯ ವೃದ್ಧ ಮಾಹೇಶ್ವರ ಪ್ರಸಂಗ ಹೀಗೆ ಇನ್ನೂ ಅನೇಕ ಕಾವ್ಯ ಭಾಗಗಳನ್ನು ಮೇಲಿನಂತೆಯೇ ವಿಶ್ಲೇಷಿಸಬಹುದಾಗಿದೆ.

ಮುಖ್ಯವಾಗಿ ಗಮನಿಸಬೇಕಾದ ವಿಚಾರವಿದು. ಸಾವಿರ ವರ್ಷಗಳ ಅವಧಿ ಯಲ್ಲಿ ಆಂತರಿಕ ಒತ್ತಡಗಳಿಂದಲೇ ಮೂರು ನಾಲ್ಕು ಬಾರಿ ರೂಪಾಂತರ ಹೊಂದಿ ನವ ಚೈತನ್ಯವನ್ನು ಪಡೆದ ಕನ್ನಡ ಸಾಹಿತ್ಯವು ಅಭಿವ್ಯಕ್ತಿಯ ಹೊಸ ಹೊಸ ರೀತಿ ಗಳನ್ನು ಸ್ವತಂತ್ರವಾಗಿಯೇ ತನ್ನದಾಗಿಸಿಕೊಂಡಿದೆ. ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯದ ಪರಿಚಯವು, ಕನ್ನಡ ಸಾಹಿತ್ಯ ಪರಂಪರೆಯ ಆಧುನಿಕೀಕರಣ ಪ್ರಕ್ರಿಯೆ ಯಲ್ಲಿ ವೇಗವರ್ಧಕದಂತೆ ಕಾರ್ಯ ನಿರ್ವಹಿಸಿದೆ. ವಾಷಿಂಗ್ಟನ್ ಇರ್ವಿಂಗ್ (1783–1859) ಎಡ್ಗರ್ ಅಲನ್ ಪೋ (1809–1849) ನಿಕೊಲಾಯ್ ಗೊಗೊಲ್ (1809–1852) ಈ ಕತೆಗಾರರಿಗಿಂತ ಸ್ವಲ್ಪ ಈಚಿನವನಾದ ನಂದಳಿಕೆ ಲಕ್ಷ್ಮೀ ನಾರಾಯಣಪ್ಪನು (1870–1901) ರಾಮಾಶ್ವಮೇಧ ಕೃತಿಯಲ್ಲಿ ನಡೆಸಿರುವ ಪ್ರಯೋಗವು ಮೇಲಿನ ಮಾತುಗಳಿಗೆ ಸಾಕಷ್ಟು ಪುರಾವೆ ಒದಗಿಸುತ್ತದೆ.

ರಾಮಾಶ್ವಮೇಧ ಕೃತಿಯನ್ನು ವಿಮರ್ಶಿಸಿ. ಎಸ್. ವಿ. ರಂಗಣ್ಣನವರು "ಚಿತ್ರವು ಸತ್ಯವಾಗಿ ಸಾಮಾನ್ಯ : ಚೌಕಟ್ಟು ಶಿವನಾಣೆ ಸುವರ್ಣ" ಎಂದು ತೀರ್ಮಾ

ನಿಸಿದ್ದಾರೆ. ಇದು ಒಪ್ಪತಕ್ಕದ್ದೆ. ಗಮನಿಸಬೇಕಾದ ಸಂಗತಿಯೆಂದರೆ–ಮುದ್ದಣನಿಗೆ ಚಿತ್ರಕ್ಕಿಂತ ಚೌಕಟ್ಟೆ ಮುಖ್ಯವಾಗಿದ್ದಿರಬೇಕು. ಅವನಿಗೆ ಹೊಸ ರೀತಿಯಲ್ಲಿ ಬರೆಯುವ ಹಂಬಲವಿತ್ತು. ಅಂದಿನ ಪರಿಸ್ಥಿತಿಯಲ್ಲಿ ಹೊಸ ದಾರಿಯನ್ನು ಹಿಡಿದ ಲೇಖಕನ ಬರಹವು ಪ್ರಕಟವಾಗುವುದು ದುಸ್ತರವೆಂಬ ಅರಿವೂ ಇತ್ತು. ಕೃತಿ ಪ್ರಕಟವಾಗುವುದೇ ಮುಖ್ಯವೆಂದು ಭಾವಿಸಿ, ಸಾಂಪ್ರದಾಯಿಕ ಚಿತ್ರವೊಂದನ್ನು ರಚಿಸಿ ಅದಕ್ಕೆ ಸ್ವೋಪಜ್ಞತೆಯ ಸುವರ್ಣದ ಚೌಕಟ್ಟನ್ನು ಕೂಡಿಸಿದ. ಆ ಚೌಕಟ್ಟಾದರೂ ಎಂತಹುದು!

ರಾಮಾಶ್ವಮೇಧ ಕಥೆಯ ಕೇಂದ್ರದಲ್ಲಿರುವುದು ಸೀತಾ ಪರಿತ್ಯಾಗ ಪ್ರಸಂಗ. ಅಗಸನ ಮಾತಿನಿಂದಾಗಿ ರಾಮನು ಸೀತೆಯನ್ನು ಕಾಡಿಗೆ ಕಳಿಸುತ್ತಾನೆ. ಬಾಹ್ಯ ಒತ್ತಡದಿಂದ ಛಿದ್ರವಾದ ದಾಂಪತ್ಯ ರಾಮ-ಸೀತೆಯರದು. ಅನಂತರ ರಾಮ ಅಶ್ವಮೇಧ ಯಾಗದ ಸಂಕಲ್ಪ ಮಾಡುತ್ತಾನೆ. ಯಜ್ಞಾಶ್ವ ದೂಳೆಬ್ಬಿಸುತ್ತ ರಾಜ್ಯದಿಂದ ರಾಜ್ಯಕ್ಕೆ ಚಲಿಸುತ್ತದೆ. ಘರ್ಷಣೆ ಹೋರಾಟಗಳು ಸಂಭವಿಸುವುದಿಲ್ಲವಾದರೂ ಯಜ್ಞಾಶ್ವದ ಪರಿಭ್ರಮಣೆಯಲ್ಲಿ ಈ ಸಾಧ್ಯತೆಗಳು ಮತ್ತೆ ಮತ್ತೆ ಸೂಚಿತವಾಗುತ್ತವೆ. ಇದೆಲ್ಲದಕ್ಕೂ ವೈದೃಶ್ಯವಾಗಿ ಮುದ್ದಣ-ಮನೋರಮೆಯರ ಸಂಭಾಷಣೆಯಲ್ಲಿ ಸಮರಸ ದಾಂಪತ್ಯದ, ಶಾಂತಿ ಸಮಾಧಾನದ ಚಿತ್ರಗಳು ಕಾಣಸುತ್ತವೆ. ಅಲ್ಲಲ್ಲಿ ಬರುವ ಈ ಸಂಭಾಷಣೆಗಳು ಕೃತಿಗೆ ಪೂರ್ತಿ ಹೊರತಾಗದೆ ಆಧುನಿಕ ಕಾದಂಬರಿಗಳ ಪೂರಕ ಕಥಾ ಸಂವಿಧಾನದಂತೆ (Sub Plot) ಕಾರ್ಯ ನಿರ್ವಹಿಸಿ, ಕೃತಿಯ ಒಟ್ಟು ಪರಿಣಾಮವನ್ನು ಹೆಚ್ಚಿಸುವಂತಹುದಾಗಿವೆ. ಮುದ್ದಣ-ಮನೋರಮೆಯರ ಸಂಭಾಷಣೆಗಳಲ್ಲಿ 'ಸಪ್ತಾಕ್ಷರೀ ಮಂತ್ರ ಪ್ರಸಂಗ'ದಂತಹ ಸನ್ನಿವೇಶಗಳು ಪ್ರತ್ಯೇಕ ಅಸ್ತಿತ್ವವನ್ನೆ ಪಡೆದುಕೊಳ್ಳುತ್ತವೆ. ಈ ಪ್ರಸಂಗದಲ್ಲಿ ಕಥಾ ಸಂವಿಧಾನವಿಲ್ಲ : ಕ್ರಿಯೆ ಎನ್ನುವಂತಹುದೇನೂ ಇಲ್ಲಿ ನಡೆಯುವುದಿಲ್ಲ : ಆದರೂ ಇದು ಒಳ್ಳೆಯ ಸಾಹಿತ್ಯವಾಗಿರುವುದು ಹೇಗೆ ? ಎಂದು ಯೋಚಿಸಿ ನೋಡಿದಾಗ ಮುದ್ದಣನ ಹಿರಿಮೆ ಗೋಚರವಾಗುತ್ತದೆ. ಆಧುನಿಕ ಸಣ್ಣಕತೆಗೆ ಘರ್ಷಣೆಯ ಚಿತ್ರಣ ಮತ್ತು ಅದರ ಪರಿಹಾರದ ನಿರೂಪಣೆಯೇ ಮುಖ್ಯವಲ್ಲ. ಸನ್ನಿವೇಶವೊಂದನ್ನು ತೆರೆದಿಡುವುದರ ಕಡೆಗೆ ಅದರ ಬೆಳವಣಿಗೆಯಿದೆ ಎಂದು ವಿಮರ್ಶಕರು ಅಭಿಪ್ರಾಯ ಪಡುತ್ತಾರೆ. ಆಧುನಿಕ ಕಥನದ ಬೆಳವಣಿಗೆಯ ಸ್ವರೂಪವನ್ನು ಕುರಿತು ವಿವೇಚಿಸುತ್ತಾ, ಎಡಿತ್ ವ್ಹಾರ್ಟನ್ ಎಂಬ ಅಮೇರಿಕನ್ ಲೇಖಕಿಯು 'ಕಾದಂಬರಿಯು ಕ್ರಿಯೆ ರಸ್ತೆಗಳಿಂದ ಆತ್ಮಕ್ಕೆ ಸ್ಥಳಾಂತರವಾದಾಗ ಹೊಸ ರೀತಿಯ ಕಥನ ಸಾಹಿತ್ಯದ ಪ್ರಾರಂಭವಾಯಿತು' ಎಂದಿದ್ದಾಳೆ. 'ಸಪ್ತಾಕ್ಷರೀ ಮಂತ್ರ ಪ್ರಸಂಗ'ದಲ್ಲಿ ಆತ್ಮೀಯ ಸಂಬಂಧವೊಂದರ ಚಿತ್ರಣ ತೆರೆದುಕೊಳ್ಳುವ ರೀತಿ : ಮುದ್ದಣನು ಮನೋರಮೆಯ ಹಾಗೂ ಓದುಗನ ಕುತೂಹಲವನ್ನು ಕಟ್ಟಿ ಬೆಳೆಸಿ ಕೊನೆಗೆ ಹಾಸ್ಯದಲ್ಲಿ ಆಸ್ಫೋಟಿಸುವ ಬಗೆ ; ಇವುಗಳು ಆಧುನಿಕ ಸಣ್ಣಕತೆಗಳ ತಂತ್ರಗಳಲ್ಲವೆ ?

ಮುದ್ದಣನ ಹಿನ್ನೆಲೆ, ರಾಮಾಶ್ವಮೇಧ ಕೃತಿಯ ಸೊಬಗು, ಆಧುನಿಕ ಬರಹಗಾರರ ಮೇಲೆ ಅವನ ಪ್ರಭಾವ, ಈ ವಿಚಾರಗಳನ್ನು ಕುರಿತು ಪಂಜೆ ಮಂಗೇಶರಾಯರು ನಡೆಸಿರುವ ಚಿಂತನೆಯು ಗಮನಾರ್ಹವಾದುದಾಗಿದೆ. "ಹಳ್ಳಿಯ ಶಾಲೆಯ ವಿದ್ಯಾಭ್ಯಾಸದಿಂದ ನಾರಾಯಣಪ್ಪನವರು ದೊಡ್ಡ ಕವಿಯಾದರೆಂದು ಯಾರಾದರೂ ಹೇಳಿದರೆ ನಾನು ಒಪ್ಪಲಾರೆನು. ಅವರ ಶಿಕ್ಷಣವು ಈಗಲೂ ನಮ್ಮ ಹಳ್ಳಿಗಳಲ್ಲಿ ವಾಡಿಕೆಯಾಗಿರುವ ಹಳೆಯ 'ಕಿಂಡರ್‌ಗಾರ್ಟನ್' ಕ್ರಮವನ್ನು ಅನುಸರಿಸಿತ್ತು. ಈ ಕ್ರಮದಲ್ಲಿ ಇಡೀ ಗ್ರಾಮವೇ ಪಾಠಶಾಲೆ; ಹಳ್ಳಿಯವರೆಲ್ಲರೂ ವಿದ್ಯಾರ್ಥಿಗಳು. ಭಗವಂತನ ಸಾನ್ನಿಧ್ಯಪ್ರಾಪ್ತಿಯೇ ಧ್ಯೇಯವು. ಆ ಧ್ಯೇಯಕ್ಕೆ ಹೊಂದಿಕೊಂಡು ದೇವಸ್ಥಾನದಲ್ಲಿ ಪುರಾಣ ಶ್ರವಣ; ಆ ಪುರಾಣ ಪುರುಷರ ಪರವಾಗಿ ಕಟ್ಟಿದ್ದ ಯಕ್ಷಗಾನ ಪ್ರಸಂಗ.........................ಹಳ್ಳಿಯ ಅಯನ ಆಟಗಳ ಮೂಲಕ ವ್ಯಾಯಾಮಯುಕ್ತವಾಗಿ ದೊರೆಯುವ ಸೃಷ್ಟಿ ನಿರೀಕ್ಷಣ; ಹೀಗೆ ಸರ್ವತೋಮುಖವಾಗಿರುವ ಆರ್ಯ ವಿದ್ಯಾಭ್ಯಾಸದಲ್ಲಿ ನಾರಾಯಣಪ್ಪನವರ ಭಾವೀ ಪಾಂಡಿತ್ಯದ ಮೂಲವನ್ನು ಕಂಡು ಹಿಡಿಯಬೇಕು."[16] ಎಂದರೆ ಪರಂಪರೆಯಲ್ಲಿ ಅದ್ದಿ ತೆಗೆದಂತಹ ವ್ಯಕ್ತಿತ್ವ ಮುದ್ದಣನದು. ಪಂಜೆಯವರು ರಾಮಾಶ್ವಮೇಧ ಕೃತಿಯನ್ನು 'ವಜ್ರ' ಎಂದು ಕರೆದಿರುವುದಲ್ಲದೆ ಕೃತಿಯ ಪ್ರಭಾವವನ್ನು ಕುರಿತಂತೆ ಹೀಗೆ ಹೇಳಿದ್ದಾರೆ—"ರಾಮಾಶ್ವಮೇಧವು ಕೈಗೆ ಸಿಕ್ಕದೆ ಹೋಗಿದ್ದರೆ 'ಶ್ರೀನಿವಾಸನ' ನವಿಲ್ಗರಿಯ ಚಿತ್ರದ ಕಡ್ಡಿಯು ವೆಂಕಟಾಚಾರ್ಯರ ಕಾದಂಬರೀ ಭಾಷಾಮಾರ್ಗಕ್ಕೆ ತಿರುಗುತ್ತಿತ್ತೋ? ಏನೋ? ಯಾರಿಗೆ ಗೊತ್ತು."[17] ಪಂಜೆಯವರು 'ಕನ್ನಡದ ಕತೆಗಳ ವಿಧಾತೃ' ಎಂದು ಗೋವಿಂದ ಪೈ ಅವರು ಹೇಳಿದ್ದಾರೆ. ಪಂಜೆಯವರ ಕತೆಗಳಲ್ಲಿ ಮುದ್ದಣನ ಕೃತಿಗಳ ಪ್ರಭಾವವು ಸ್ಪಷ್ಟವಾಗಿ ಗೋಚರಿಸುತ್ತದೆ. ರಾಮಾಶ್ವಮೇಧವಷ್ಟೇ ಅಲ್ಲ. ಪಂಜೆಯವರ ಕತೆಗಳ ಮಾದರಿಯೂ ಶ್ರೀನಿವಾಸರಿಗೆ ಲಭ್ಯವಾಗಿತ್ತು. ಈ ಮಾದರಿಗಳಿಲ್ಲದಿದ್ದರೆ ಶ್ರೀನಿವಾಸರ ಬರವಣಿಗೆ ಯಾವ ದಾರಿ ಹಿಡಿಯುತ್ತಿದ್ದಿತೋ? "ಯಾರಿಗೆ ಗೊತ್ತು?"

ಮಾಸ್ತಿಯವರ ಕತೆಗಳನ್ನು ವಿಶ್ಲೇಷಿಸುತ್ತ ಎಂ. ಜಿ. ಕೃಷ್ಣಮೂರ್ತಿಯವರು "ವಿಷಯ ಏನೇ ಆದರೂ ಉದ್ರೇಕಗೊಳ್ಳದೆ ಕಥೆ ಹೇಳುವುದು." "ಕತೆ ನಡೆದ ಕಾಲ ಮತ್ತು ಕತೆ ಹೇಳುವ ಕಾಲಗಳನ್ನು ದೂರವಿಡುವುದು."[18] ಮೊದಲಾದ ವಿಶೇಷ

---

16. ಸಂ. ಗೋವಿಂದ ಪೈ ಮ. ಮಿತ್ರರು: ಶ್ರೀ ಪಂಜೆಯವರ ನೆನಪಿಗಾಗಿ. ಪು. 76-77.

17. ಶ್ರೀ ಪಂಜೆಯವರ ನೆನಪಿಗಾಗಿ ಪು. 82

18. ಎಂ. ಜಿ. ಕೃಷ್ಣಮೂರ್ತಿ, ಆಧುನಿಕ ಭಾರತೀಯ ಸಾಹಿತ್ಯ, ಅಕ್ಷರ ಪ್ರಕಾಶನ, ಸಾಗರ. 1970. ಪು. [illegible]4

ಅಂಶಗಳನ್ನು ಗುರುತಿಸಿದ್ದಾರೆ. ಈ ವೈಶಿಷ್ಟ್ಯಗಳು ಮಾಸ್ತಿಯವರ ಕತೆಗಳಿಗೆ ಮಾತ್ರ ಸೀಮಿತವಲ್ಲ. ಆನಂದಕಂದ, ಎ.ಆರ್.ಕೃ. ನವರತ್ನ ರಾಮರಾಯರು ಹೀಗೆ ಅನೇಕ ನವೋದಯ ಕತೆಗಾರರ ಕತೆಗಳಲ್ಲಿ ಕಾಣಿಸುವ ಅಂಶಗಳಿವು. ಇದಲ್ಲದೆ ಇನ್ನಿತರ ವೈಶಿಷ್ಟ್ಯಗಳನ್ನೂ ಕನ್ನಡದ ಸಣ್ಣಕತೆ ತನ್ನ ಆರಂಭ ಕಾಲದಲ್ಲಿಯೇ ಪ್ರಕಟಿಸಿದೆ. ಕನ್ನಡದ ಆಧುನಿಕ ಸಣ್ಣಕತೆಯು ತನ್ನ ಚರಿತ್ರೆಯ ಆರಂಭ ಕಾಲದಲ್ಲಿಯೇ ಅಪೂರ್ವವಾದ ಪರಿಪಕ್ವತೆಯನ್ನು ಪ್ರದರ್ಶಿಸಿದೆ. ಈ ಹಂತದಲ್ಲಿಯೆ ಅದು ಉಳಿವಿಗಾಗಿ ಕೌತುಕಪೂರ್ಣ ಕುತೂಹಲಕಾರಿ ಘಟನೆಗಳಷ್ಟನ್ನೆ ಆಗಲಿ, ಅನಿರೀಕ್ಷಿತ ತಿರುವು ಮತ್ತು ಮುಕ್ತಾಯ ಮುಂತಾದ ತಾಂತ್ರಿಕ ಅಂಶಗಳನ್ನಾಗಲಿ ಅವಲಂಬಿಸುವುದಿಲ್ಲ. ಬದಲಿಗೆ ಪ್ರೊ. ಎಲ್. ಎಸ್. ಶೇಷಗಿರಿ ರಾವ್ ಅವರು ಗುರುತಿಸಿರುವಂತೆ "ಜೀವನದಲ್ಲಿ ನೈಜವೂ ಆಳವೂ ಆದ ಶ್ರದ್ಧೆ, ಜೊತೆಗೆ ಉಪದೇಶ ಪ್ರವೃತ್ತಿಯಿಂದ ಬಿಡುಗಡೆ, ಶುದ್ಧ ಹಾಸ್ಯ, ಸ್ಪಷ್ಟ ಸರಳ ಸಹಜ ಶೈಲಿ ಎಲ್ಲವನ್ನೂ ಪಡೆದುಕೊಂಡುದು ಆಶ್ಚರ್ಯದ ಸಂಗತಿ."[19] ಈ ಇತ್ಯಾತ್ಮಕ ಅಂಶಗಳನ್ನೆಲ್ಲ ಆಧುನಿಕ ಕನ್ನಡ ಸಣ್ಣಕತೆಯು ತನ್ನ ಹಿಂದಿನ ಪರಂಪರೆಯಿಂದಲೇ ಪಡೆದುಕೊಂಡಿದೆಯೆಂಬುದು ಸ್ವಯಂ ಸ್ಪಷ್ಟವಾಗಿದೆ. ಹಿಂದಿನ ಕಥಾಪರಂಪರೆಯ ಅಭಿವ್ಯಕ್ತಿಯ ರೀತಿ ನೀತಿಗಳನ್ನು ನವೋದಯ ಕಾಲದ ಕತೆಗಳು ತಂದುಕೊಂಡುದರಿಂದ ಮೊದಲ ನೋಟಕ್ಕೆ ತೀರ ಸರಳವಾಗಿ ಕಾಣುವ ಆದರೆ ಹಲವು ಅರ್ಥವಲಯಗಳನ್ನು ತನ್ನಲ್ಲಡಗಿಸಿಕೊಂಡಿರುವ ಕತೆಗಳನ್ನು ಸೃಜಿಸುವುದು ಸಾಧ್ಯವಾಗಿದೆ. ಈ ವಿಚಾರವನ್ನು ಇನ್ನಷ್ಟು ಸರಳಗೊಳಿಸಿ ಹೀಗೆ ಹೇಳಬಹುದು—ಮಾಸ್ತಿ, ಕುವೆಂಪು, ಗೊರೂರು ಇವರುಗಳ ಕತೆಯೊಂದನ್ನು ಪ್ರೌಢ ಶಾಲೆಯ ವಿದ್ಯಾರ್ಥಿಗಳಿಗೆ ತರಗತಿಯಲ್ಲಿ ತಲುಪಿಸುವುದು ಸಾಧ್ಯ. ಅದೇ ಕತೆಯು ಸ್ನಾತಕೋತ್ತರ ತರಗತಿಯಲ್ಲಿ ಸಾಹಿತ್ಯಾಭ್ಯಾಸ ಮಾಡುವ ವಿದ್ಯಾರ್ಥಿಗಳ ಚರ್ಚೆಗೂ ಗ್ರಾಸವನ್ನು ಒದಗಿಸಬಲ್ಲುದಾಗಿರುತ್ತದೆ. ವಿವಿಧ ವಯೋಮಾನದ, ವಿಭಿನ್ನ ಸಾಮಾಜಿಕ, ಆರ್ಥಿಕ ಹಿನ್ನೆಲೆಗಳಿರುವ ವ್ಯಕ್ತಿಗಳು ತಮ್ಮ ಎಲ್ಲ ಇತಿ ಮಿತಿಗಳಲ್ಲಿಯೂ ಈ ಕತೆಗಳಿಗೆ ಸ್ಪಂದಿಸುವುದು ಸಾಧ್ಯವಾಗುತ್ತದೆ. ಪ್ರಗತಿಶೀಲ ಮತ್ತು ನವ್ಯಕತೆಗಳು ಹಿಂದಿನ ಕಥಾಪರಂಪರೆಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದುದರಿಂದಲೂ ಇನ್ನಿತರ ಕಾರಣಗಳಿಂದಲೂ ಈ ವ್ಯಾಪ್ತಿಯನ್ನು ಕಳೆದುಕೊಂಡಿವೆ.

ನವೋದಯ ಕತೆಗಾರರು ಆದರ್ಶಗಳ ಕಡೆಗೇ ಮುಖಮಾಡಿ ವಾಸ್ತವಿಕತೆಗೆ ಬೆನ್ನು ತೋರಿಸುತ್ತಾರೆಂಬ, ಆದುದರಿಂದಲೆ ಹಲವಾರು ಒತ್ತಡಗಳಿಂದ ವಿಘಟಿತವಾಗುತ್ತಿರುವ ವ್ಯಕ್ತಿತ್ವಗಳು ಮತ್ತು ಸಮಾಜವ್ಯವಸ್ಥೆಯಲ್ಲಿಯೂ ಹೊಂದಾಣಿಕೆ ಮತ್ತು ಸಾಮರಸ್ಯಗಳ ಮೂಲಸ್ರೋತವನ್ನೇ ಅರಸುತ್ತಾರೆಂಬ ಆಕ್ಷೇಪಣೆಗಳಿವೆ. ಆದರೆ

---

19. ಎಲ್. ಎಸ್. ಶೇಷಗಿರಿರಾವ್. ಕನ್ನಡ ಕಥಾಸಾಹಿತ್ಯ, (1915-70) ಚಿನ್ನದ ಬೆಳಸು–ಕನ್ನಡ ಸಾಹಿತ್ಯ ಪರಿಷತ್ತು, 1970, ಪು. 26

ಈ ಅರಸುವಿಕೆಯ ಹಿಂದೆ. ಜೀವನದಲ್ಲಿ ಒದಗಿದುದನ್ನು ಗುರುತಿಸಬೇಕೆಂಬ, ಕಟ್ಟಿಕೊಡಬೇಕೆಂಬ ಮಹದಾಶಯವಿರುವುದನ್ನು ಗಮನಿಸಬೇಕಾಗುತ್ತದೆ.

ನವೋದಯ ಕತೆಗಳಿಗೂ ಪ್ರಗತಿಶೀಲ ಕತೆಗಳಿಗೂ ಅಭಿವ್ಯಕ್ತಿಯ ವಿಧಾನದಲ್ಲಿ ಹೆಚ್ಚು ವ್ಯತ್ಯಾಸಗಳಿಲ್ಲ. ಚುರುಕಾದ ಸಂಭಾಷಣೆ ; ಅನಿರೀಕ್ಷಿತ ಮುಕ್ತಾಯ ; ವೈಯಕ್ತಿಕ ಮತ್ತು ಸಾಮಾಜಿಕ ಸಮಸ್ಯೆಗಳಿಗೆ ಕಥಾಲೋಕದಲ್ಲಿ ಪ್ರವೇಶ ದೊರಕಿಸಿಕೊಟ್ಟದ್ದು ; ನಗರ ಮತ್ತು ಅರೆನಗರ ಪ್ರದೇಶಗಳ, ಕೆಳ ಮಧ್ಯಮ ವರ್ಗ ಮತ್ತು ಬಡ ಜನತೆಯನ್ನು ಒಳಗೊಂಡ ವ್ಯಾಪಕವಾದ ಹೊಸ ಓದುಗರ ವೃಂದವನ್ನು ಸೃಜಿಸಿದ್ದು—ಇವು ಪ್ರಗತಿಶೀಲ ಕತೆಗಳ ಇತ್ಯಾತ್ಮಕ ವೈಶಿಷ್ಟ್ಯಗಳಾಗಿವೆ. ಸರಳವಾದ ಘಟನೆಗಳನ್ನೂ ಕತೆಯಾಗಿ ಮಾರ್ಪಡಿಸಬೇಕೆಂಬ ಚಪಲ ; ನಿರ್ದಿಷ್ಟ ಗುಣಗಳಿಗೆ ಪ್ರತಿನಿಧಿಗಳಾಗುವ ಕಪ್ಪು-ಬಿಳುಪು ಪಾತ್ರಗಳು ; ಮಿತಿ ಮೀರಿದ ವಾಚಾಳಿತನಗಳಿಂದ ಪ್ರಗತಿಶೀಲ ಕತೆಗಳು ಸೊರಗುತ್ತವೆ.

ನವ್ಯರು ಸಣ್ಣ ಕತೆಗಳ ಬಂಧಕ್ಕೆ ತಂದ ಬಿಗುವು, ಭಾಷೆಯ ಬಳಕೆಯಲ್ಲಿ ತೋರಿಸುವ ತುಂಬು ಎಚ್ಚರ ಮತ್ತು ಶಿಸ್ತು, ಕತೆಗಳ ಕಟ್ಟಡದಲ್ಲಿ ಕಾಣಿಸುವ ಕಲಾತ್ಮಕ ಕುಸುರಿಗೆಲಸದ ಸೊಬಗು—ಇವುಗಳನ್ನು ಮನಃಪೂರ್ವಕವಾಗಿ ಮೆಚ್ಚಬಹುದಾಗಿದೆ. ಆದರೆ "ಸ ದೇವಂ ವಿಕ್ರೀಯ ತದ್ಯಾತ್ರೋತ್ಸವ ಮಕಾರ್ಷೀತ್" (ಅವನು ದೇವರನ್ನೇ ಮಾರಿ ಜಾತ್ರೆಯನ್ನು ನಡೆಸಿದನು) ಎಂಬಂತೆ ಅನುಭವದ ಆಯ್ಕೆಯಲ್ಲಿಯೇ ನವ್ಯರು ಮುಗ್ಗರಿಸಿದ್ದಾರೆ. ಅತ್ಯಂತ ಆಪ್ತವಾದ ಅನುಭವಗಳನ್ನು ಮಾತ್ರ ಕತೆಯಾಗಿಸಬೇಕೆಂಬ ಹಟದಿಂದಾಗಿ ಅನೇಕ ನವ್ಯ ಕತೆಗಳು ಆತ್ಮಾನುಕಂಪೆಯಲ್ಲಿಯೋ ಇಲ್ಲವೆ ಆತ್ಮರತಿಯಲ್ಲಿಯೊ ಮುಳುಗಿಯೇ ಹೋಗುತ್ತವೆ. ಕೆಲವೊಮ್ಮೆ ನವ್ಯ ಕತೆಗಳಲ್ಲಿ ವ್ಯಕ್ತವಾಗಿರುವ ಅನುಭವಗಳು ಇಲ್ಲಿನ ಸಾಮಾಜಿಕ ಸಂದರ್ಭದಲ್ಲಿ ಅಪ್ರಸ್ತುತವಾಗಿರುತ್ತವೆ. ಪ್ರಖ್ಯಾತವಾದ 'ಕ್ಷಿತಿಜ' ಕತೆಯ ನಾಯಕಿಯ ತೊಳಲಾಟಕ್ಕೆ ಆತ್ಮೀಯವಾಗಿ ಪ್ರತಿಸ್ಪಂದಿಸಬಲ್ಲ ಓದುಗರ ಸಂಖ್ಯೆ ಎಷ್ಟಿರಬಹುದು ?

ಹೊಸಗನ್ನಡ ಸಣ್ಣ ಕತೆಗಳ ಬೆಳವಣಿಗೆಯಲ್ಲಿ ಮತ್ತೊಂದು ಮಜಲನ್ನು ಈಗ ರಚಿತವಾಗುತ್ತಿರುವ ನವ್ಯೋತ್ತರ ಸಣ್ಣ ಕತೆಗಳಲ್ಲಿ ಕಾಣಬಹುದಾಗಿದೆ. ಸಾಹಿತ್ಯ ಅಕಾಡೆಮಿಯ ದಶವಾರ್ಷಿಕ ಸಣ್ಣ ಕತೆಗಳ ಸಂಕಲನಕ್ಕೆ ಬರೆದಿರುವ ನಾಲ್ಕು ಮಾತಿನಲ್ಲಿ ಪ್ರೊ. ಕ. ವೆಂ. ರಾಜಗೋಪಾಲ ಅವರು ಇಂದಿನ ಸಣ್ಣ ಕತೆಗಳ ಸ್ವರೂಪವನ್ನು ಕುರಿತಂತೆ ಕೆಲವು ಮುಖ್ಯ ಅಂಶಗಳನ್ನು ಗುರುತಿಸಿದ್ದಾರೆ. ಅವರ ಅಭಿಪ್ರಾಯಗಳನ್ನು ಹೀಗೆ ಸಂಗ್ರಹಿಸಬಹುದು—

1) ಇಂದಿನ ಕತೆಗಳಲ್ಲಿ ಸಾಮಾಜಿಕ ಪ್ರಗತಿಯ ಒಲವು ಮುಖ್ಯವಾಗಿದೆ.

2) ಇಂದಿನ ಸಣ್ಣ ಕತೆಯ ಶೈಲಿಯಲ್ಲಿ ಆಪ್ತ ರಚನೆಯು ಒಂದು ಸಮಸ್ಯೆಯಲ್ಲ.

3) ಈ ಸಣ್ಣ ಕತೆಯು ಸಮಕಾಲಿಕ ಚೌಕಟ್ಟನ್ನಲ್ಲದೆ, ಕತೆಗಾರರ ಬದುಕನ್ನೂ ಒಳಗೊಳ್ಳುವಂತೆ ಧ್ವನಿಸತೊಡಗಿದೆ.

4) ಕೆಲವಂತೂ ಸಮಕಾಲಿಕ ದಾಖಲೆಗಳೆಂದು ಕರೆಯಬಹುದಾದಷ್ಟು ಗಟ್ಟಿಯಾಗಿರುತ್ತವೆ. ಒಟ್ಟಿನಲ್ಲಿ ಇಂದಿನ ಸಣ್ಣ ಕತೆಗಳು ಸಾಕಷ್ಟು ಗಟ್ಟಿಯಾದ ರಚನೆಗಳಾಗುತ್ತಿವೆ ಎಂದು ಅವರ ಅಭಿಪ್ರಾಯ.

ಈ ಅಭಿಪ್ರಾಯವನ್ನು ಅನುಮೋದಿಸುತ್ತಾ ಇದಕ್ಕೆ ಕಾರಣಗಳನ್ನು ಕುರಿತು ಯೋಚಿಸಬಹುದಾಗಿದೆ. ಇಂದಿನ ಕತೆಗಳು ಸಮಕಾಲಿಕ ದಾಖಲೆಗಳೆಂಬಷ್ಟು ಗಟ್ಟಿಯಾಗಿರುವುದಕ್ಕೆ ಒಂದು ಕಾರಣ—ಇಂದಿನ ಕತೆಗಾರರು ಹಿಂದಿನ ಸಾಹಿತ್ಯ ಮತ್ತು ಕಥಾ ಪರಂಪರೆಯನ್ನು ನಿರ್ಲಕ್ಷಿಸದಿರುವುದು. ಎಂದರೆ ಈ ಕತೆಗಾರರು ಪರಂಪರಾಗತವಾದುದೆಲ್ಲವನ್ನೂ ಕಣ್ಣು ಮುಚ್ಚಿ ಒಪ್ಪಿಕೊಳ್ಳುತ್ತಾರೆಂದಲ್ಲ. ಇವರ ಬರವಣಿಗೆಯ ಕೇಂದ್ರದಲ್ಲಿ ಪ್ರತಿಭಟನೆಯ ಧ್ವನಿಯಿದೆ. ಆದರೆ ಆ ಪ್ರತಿಭಟನೆಯ ಹಿಂದಿರುವುದು ಪ್ರೀತಿಯೇ ಆಗಿದೆ. ಈಗ ಕತೆಗಳನ್ನು ಬರೆಯುತ್ತಿರುವವರಲ್ಲಿ ಹಲವರು ಜಾನಪದ ಅಧ್ಯಯನದಲ್ಲಿಯೂ ಆಸಕ್ತರಾಗಿರುವುದು ಕೇವಲ ಆಕಸ್ಮಿಕವಾಗಿರಲಾರದು. ಸಾಂಸ್ಕೃತಿಕ ಹಾಗೂ ಸಾಮಾಜಿಕ ಸಂದರ್ಭಗಳಲ್ಲಿ ಎದುರಿಸಬೇಕಾಗುವ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಲು, ಎಲ್ಲೆಲ್ಲೋ ನೋಡುತ್ತ ಪರಿತಪಿಸುವ ರೀತಿ ಮುಕ್ತಾಯವಾಗಿದ್ದು, ಸಣ್ಣ ಕತೆಗಳ ಬರಹಗಾರರು ಈ ನೆಲದ ಈ ಜನದ ಸಮಸ್ಯೆಗಳತ್ತ ಒಳನೋಟಗಳನ್ನು ಹಾಯಿಸುತ್ತಿರುವುದು ತುಂಬ ಸ್ವಾಗತಾರ್ಹವಾದ ಮತ್ತು ಆಶಾದಾಯಕವಾದ ಬೆಳವಣಿಗೆಯಾಗಿದೆ.

# ಶ್ರೀರಂಗಪಟ್ಟಣ ತಾಲೂಕಿನ ೧೪ನೆಯ ನಂಬರಿನ ಶಾಸನ ಭಾಗದಲ್ಲಿ ಒಂದು ವಿವರಣೆ

ಡಾ|| ಚಾಕಾರು ಪರಮೇಶ್ವರ ಭಟ್ಟ

ಬಿ. ಲೂಯಿ ರೈಸ್ "ಎಪಿಗ್ರಾಫಿಯಾ ಕರ್ನಾಟಿಕ" ಸಂಪುಟ ೩ ಭಾಗ ೧ ಪುಟ ೩೪–೩೭ರ ಶಾಸನ ಪಾಠವನ್ನನುಸರಿಸಿದ ಶಾಸನ ವಿವರಣೆಯಲ್ಲಿ ಮಾನ್ಯ ಡಾ|| ವೆಂಕಟಾಚಲ ಶಾಸ್ತ್ರಿಗಳು ರೈಸರ ಇಂಗ್ಲಿಷ್ ಅನುವಾದವನ್ನನುಸರಿಸಿಕೊಟ್ಟ ಕನ್ನಡ ಅನುವಾದದಲ್ಲಿ ಒಂದೆಡೆ ಕಂಡ ಅಸಮರ್ಪಕ ಅನುವಾದದ ಬಗೆಗೆ ಒಂದು ವಿವರಣೆ ನೀಡುವುದು ಪ್ರಕೃತ ಲೇಖನದ ಉದ್ದೇಶ. ಇದಕ್ಕೆ ಪೂರಕವಾಗಿ, ಏತದ್ವಿಷಯಕ್ಕೆ ಸಂಬಂಧಿಸಿದ ಶಾಸನ ಶ್ಲೋಕಗಳನ್ನೂ ಲೂಯಿ ರೈಸರ ಆ ಶ್ಲೋಕಗಳ ಇಂಗ್ಲಿಷ್ ಅನುವಾದವನ್ನೂ, ಡಾ|| ಶಾಸ್ತ್ರಿಗಳು ಮೈಸೂರು ವಿಶ್ವವಿದ್ಯಾಲಯ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯ ಎಂ. ಎ. ವಿದ್ಯಾರ್ಥಿಗಳಿಗಾಗಿ ಸಿದ್ಧಪಡಿಸಿದ ಪ್ರಕೃತ ಶ್ಲೋಕಗಳ ಕನ್ನಡ ಅನುವಾದವನ್ನೂ ಓದುಗರ ಅವಗಾಹನೆಗಾಗಿ ಉದ್ಧರಿಸಿರುತ್ತೇನೆ.

ಮೇಲೆ ಹೇಳಿದ ಶಾಸನದ ೧೯ನೇ ಶ್ಲೋಕದ ವರೆಗಿನ ಅನುವಾದ ೧೪ನೆಯ ಶ್ಲೋಕದ ಕೊನೆಯ ಪಾದವನ್ನುಳಿದು ಎಲ್ಲವೂ ಸರಿಯಾಗಿದೆ. ೧೪ನೆಯ ಶ್ಲೋಕ ಹೀಗಿದೆ:

ತಸ್ಯಾಸೀದ್ದೇವರಾಜೇಂದ್ರಃ ಸೋದರಸ್ಸಮನಂತರಃ
ಚೆಂನರಾಜೋಽನುಜೋ ಯಸ್ಯ ಜಿಷ್ಣೋರ್ವಿಷ್ಣುರಿವಾಜನಿ ||

ಇದರ ಇಂಗ್ಲಿಷ್ ಅನುವಾದದಲ್ಲಿ ರೈಸ್ ಸಾಹೇಬರು His next brother was Dēva Rājendra, whose brother like Jishnu to Vishnu was Channa Raja ಎಂದು ತಿಳಿಸಿದ್ದಾರೆ. ಡಾ|| ಶಾಸ್ತ್ರಿಗಳ ಕನ್ನಡ ಅನುವಾದದಲ್ಲಿ 'ಈತನ ಬಳಿಕ ಸೋದರನಾದವನು ದೇವರಾಜೇಂದ್ರ. ಈತನಿಗೆ ಚೆನ್ನರಾಜ ತಮ್ಮ, ವಿಷ್ಣುವಿಗೆ ಜಿಷ್ಣು ಇದ್ದಹಾಗೆ! ಎಂದಿದೆ. ಇಲ್ಲಿ "ಜಿಷ್ಣೋರ್ವಿಷ್ಣುರಿವಾಜನಿ" ಎಂಬ ಭಾಗವನ್ನು ಇಂಗ್ಲಿಷಿನಲ್ಲಿ like Jishnu to Vishnu ಎಂದೂ ಕನ್ನಡದಲ್ಲಿ 'ವಿಷ್ಣುವಿಗೆ ಜಿಷ್ಣು ಇದ್ದಹಾಗೆ' ಎಂದೂ ಅನುವಾದಿಸಿದ್ದು ಸರಿಯಲ್ಲ. ಅದರ ಬದಲು ಜಿಷ್ಣುವಿಗೆ (ಇಂದ್ರನಿಗೆ) ವಿಷ್ಣು (ಉಪೇಂದ್ರ/ವಾಮನ) ಇದ್ದಂತೆ ಎಂದಾಗಬೇಕು.

ಮುಂದಿನ ೨೦ನೇ ಶ್ಲೋಕವನ್ನು ೧೬ನೇ ಶ್ಲೋಕದಲ್ಲಿ ಬರುವ ದೊಡ್ಡದೇವ ರಾಜನಿಗೆ ಅನ್ವಯಿಸುವ ಬದಲು ಅವನ ತಮ್ಮನಾದ ದೇವರಾಜ ನೃಪನಿಗೆ ಅನ್ವಯಿಸಿ ಅರ್ಥೈಸಿದುದು ಸರಿಯಲ್ಲ. ಏಕೆಂದರೆ ೧೪ನೇ ಶ್ಲೋಕದಲ್ಲಿ ಬೆಟ್ಟದ ಚಾಮರಾಜನಿಗೆ ದೇವರಾಜೇಂದ್ರನೆಂಬ ಸಹೋದರನೂ ಅವನಿಗೆ ಚಂನ್ನರಾಜನೆಂಬ ತಮ್ಮನೂ ಜನಿಸಿದ ರೆಂದು ಹೇಳಿ ಬಳಿಕ ೧೫ನೇ ಶ್ಲೋಕದಲ್ಲಿ–'ಪ್ರಜಾರಂಜಕನಾದ ದೇವರಾಜೇಂದ್ರನಿಗೆ ದಶರಥನಿಗಾದಂತೆ ನಾಲ್ವರು ಗಂಡುಮಕ್ಕಳಾದರು' ಎಂದಿದೆ. ಅನಂತರ ೧೬ನೇ ಶ್ಲೋಕದಲ್ಲಿ–'ದೊಡದೇವರಾಜನು ಆ ನಾಲ್ವರಲ್ಲಿ ಮೊದಲನೆಯುವನು (ಹಿರಿಯನು) ಖಂಡಿತವಾಗಿ ರಾಮನು, ಅವನು ಭಕ್ತಿಭಾವ ವಿವಶರಾದ ತನ್ನ ತಮ್ಮಂದಿರಿಂದ ಸೇವಿಸಲ್ಪಡುತ್ತಾನೆ' ಎಂಬ ವಿವರಣೆಯಿದೆ. ೧೭ನೆಯ ಶ್ಲೋಕದಲ್ಲಿ ದೊಡದೇವ ರಾಜನ ಗುಣ ವಿಶೇಷಗಳ ಕಥನ ಬಂದಿದೆ. ೧೮ನೆಯ ಶ್ಲೋಕವು–'ದೊಡದೇವರಾಜನ ತಮ್ಮ (ದೇವರಾಜೇಂದ್ರನ ಎರಡನೆಯ ಮಗ) ಚಿಕದೇವರಾಜನು ಲಕ್ಷ್ಮಣನಂತೆ ಮನೋವಾಕ್ಕಾಯಗಳಿಂದ ಅಣ್ಣನನ್ನು ಉಪಾಸಿಸುತ್ತಾನೆ' ಎಂದು ತಿಳಿಯುತ್ತದೆ. ೧೯ನೇ ಶ್ಲೋಕದ ಅರ್ಥ ಹೀಗೆ–'ಶುಭಗುಣಗಳಿಂದ ಅದ್ವಿತೀಯನಾದರೂ ತೃತೀಯನು (ಮೂರನೆಯುವನು) ಆಶ್ರಿತರಿಗೆ ಕಲ್ಪವೃಕ್ಷವಾದ ದೇವರಾಜ. ಇವನ ಆನಂತರ ದವನಾದ (ನಾಲ್ಕನೆಯುವನು) ಸತ್ಯ ಸಂಧನಾದ ಮರಿಯ ದೇವನು ಸಂತೋಷದಿಂದ ಅಣ್ಣನ ಸೇವೆಗೈಯುತ್ತಾನೆ.

[ಶ್ಲೋಕ ೧೪ ತಸ್ಯಾಸೀದ್ದೇವ ರಾಜೇಂದ್ರಃ ಸೋದರಸ್ಸಮನಂತರಃ ।
ಚಂನ ರಾಜೋನುಜೋ ಯಸ್ಯ ಜಿಷ್ಣೋರ್ವಿಷ್ಣುರಿವಾಜನಿ ॥

ಶ್ಲೋಕ ೧೫ ಅಸ್ಯಶ್ರೀ ದೇವರಾಜೇಂದೋ ರನುರಂಜಯತಃ ಪ್ರಜಾಃ ।
ಚತ್ವಾರೋ ಜಜ್ಞಿರೇ ಪಂಜ್ತಿಸ್ಯಂದನಸ್ಯೇವ ನಂದನಾಃ ॥

ಶ್ಲೋಕ ೧೬ ದೊಡದೇವರಾಜ ನಾಮಾ
ತೇಷಾಮಾದ್ಯೋ ರಘೂದ್ವಹೋ ನಿಯತಂ ।
ಯದ್ಭಕ್ತಿಭಾವ ವಿವಶೈ
ರ್ನಿತ್ಯಂ ಪರಿಚರ್ಯತೇ ನಿಜೈರನುಜೈಃ ॥

ಶ್ಲೋಕ ೧೭ ಶುಚಿಸ್ಸುಶೀಲ ಸ್ಸುಕೃತೀ ಕೃತಜ್ಞೋ
ದೃಢವ್ರತೋ ದಾನಪರೋ ದಯಾಲುಃ ।
ಪ್ರತಾಪವಾನ್ವಿಶ್ರುತ ಪುಣ್ಯಕೀರ್ತಿ
ರಾಸೀದಸೌ ಶ್ರೀ ದೊಡದೇವರಾಜಃ ॥

ಶ್ಲೋಕ ೧೮ ಲಕ್ಷ್ಮಣ ಇವ ದ್ವಿತೀಯ
ಸ್ತೇಷು ಶ್ರೀ ಚಿಕ್ಕದೇವರಾಜೇಂದ್ರಃ
ಮನಸಾ ವಚಸಾ ವಪುಷಾ
ತಮುಪಾಸ್ತೇ ಭ್ರಾತರಂ ಜ್ಯೇಷ್ಠಂ ॥

ಶ್ಲೋಕ ೧೯ ಜಯತಿ ಶುಭಗುಣೈಸ್ತೈರ ದ್ವಿತೀಯಸ್ತೃತೀಯಃ
ಶ್ರಿತಜನ ಸುರಭೂಜೋ ದೇವರಾಜ ಕ್ಷಿತೀಂದ್ರ ।
ಪರಿಚರತಿ ಮುದಾ ಯಂ ಭವ್ಯಕರ್ಮಾನುಜನ್ಮಾ
ಸ ಖಲು ಮರಿಯ ದೇವಕ್ಷ್ಮಾಪತಿ ಸ್ಸತ್ಯಸಂಧಃ]

ಮುಂದಿನ ೨೦ನೆ ಶ್ಲೋಕ ಹೀಗಿದೆ ;

ದಾತರಿ ದಯಾ ಸಮುದ್ರೇ ದಾಕ್ಷಿಣ್ಯಶೇವಧೌ ಧೀರೇ ।
ರಕ್ಷತಿ ಧರಾಮಮುಷ್ಮಿನ್ ರಾಘವ ಇವ ಸರ್ವತಃ ಸೌಖ್ಯಮ್ ॥

ಈ ಮೇಲಿನ ಶ್ಲೋಕದ ಶಾಸನಾನುವಾದ (ಕನ್ನಡ)ದಲ್ಲಿ—"ದೇವರಾಜನು ದಾತೃ, ದಯಾಪರ, ಧೀರ, ರಾಘವನಂತೆ ಎಲ್ಲರನ್ನೂ ಸೌಖ್ಯದಿಂದಿರುವಂತೆ ನೋಡಿಕೊಳ್ಳುತ್ತಾ ರಾಜ್ಯವನ್ನು ಕಾಪಾಡುತ್ತಿದ್ದನು." ಎಂದಿದೆ. ಹಾಗೆಯೇ ರೈಸರ ಇಂಗ್ಲಿಷ್ ಅನುವಾದದಲ್ಲಿ—Generous, an ocean of kindness, skilful, a mine of bounty, brave, he (Deva Raja) protected the earth maintaining all in happiness like Rama" ಎಂದಿದೆ. ಇಲ್ಲಿ ಈ ಶ್ಲೋಕ ವಿಷಯವನ್ನು ಇಬ್ಬರು ಅನುವಾದಕರೂ ದೇವರಾಜನಿಗೆ ಹೊಂದಿಸಿ ಅರ್ಥ ಮಾಡಿದುದು ಸರಿಯಲ್ಲವೆನ್ನಬೇಕಾಗುತ್ತದೆ. ಏಕೆಂದರೆ, ೧೯ನೇ ಶ್ಲೋಕದಲ್ಲಿ ಕೊನೆಗೆ ಬರುವ ಹೆಸರು ಮರಿಯದೇವನದು. ಒಂದು ವೇಳೆ ಮರಿಯದೇವನಿಗೆ ಅನ್ವಯಿಸಿದ್ದರೆ ಸಾಮೀಪ್ಯದಿಂದ ದೇವರಾಜನಿಗೆ ಅನ್ವಯಿಸುವುದಕ್ಕಿಂತ ಸೂಕ್ತ. ಮರಿಯದೇವನ ವಿಷಯ ಬಂದ ಬಳಿಕ ಅವನ ಹಿಂದಿನವನಾದ ದೇವರಾಜನಿಗೆ ಹೊಂದಿಸಿ ಹೇಳಿರುದು ಸರಿಯಲ್ಲ. ಇಲ್ಲಿ ಶಾಸನಕಾರನ ಅಭಿಮತವಾದರೋ ಮರಿಯದೇವನಿಗೆ ಸಂಬಂಧಿಸಿಯೂ ಇಲ್ಲವೆನ್ನಬೇಕು. ಕಾರಣ—೧೬ನೇ ಶ್ಲೋಕದಲ್ಲಿ ದೊಡ್ಡ ದೇವರಾಜನನ್ನು "ರಘೂದ್ವಹ" (ಶ್ರೀರಾಮ) ಎಂದು ವಿಶೇಷಿಸಿದ್ದುದರಿಂದಲೂ ಶ್ಲೋಕ ೧೭ರಲ್ಲಿ ಅವನನ್ನು "ದಾನಪರೋ ದಯಾಲುಃ" ಎಂದು ಮೊದಲಾಗಿ ಬಣ್ಣಿಸಿದುದರಿಂದಲೂ, ಶ್ರೀರಾಮನಿಗೆ ಲಕ್ಷ್ಮಣಾದಿ ಮೂವರು ತಮ್ಮಂದಿರಿದ್ದಂತೆ ಚಿಕ ದೇವರಾಜ, ದೇವರಾಜ, ಮರಿಯರಾಜರೆಂಬ ತಮ್ಮಂದಿರು ಸೇವೆಗೈಯುತ್ತಿದ್ದಾರೆಂದು ೧೮, ೧೯ನೇ ಶ್ಲೋಕಗಳಲ್ಲಿ ಬಂದುದರಿಂದಲೂ 'ದಾತರಿ' ಎಂಬಿತ್ಯಾದಿ ಶ್ಲೋಕ ಹಾಗೂ ಮುಂದಿನ ೨೬ನೇ ಶ್ಲೋಕದ ವರೆಗಿನ ವರ್ಣಿತ ವಿಷಯಗಳು ದೊಡ ದೇವರಾಜನಿಗೇ ಅನ್ವಯಿಸುವುದು ಶಾಸನಕಾರನ ಮತವೆಂಬುದು ಸ್ಪಷ್ಟ.

ಶಾಸನದ ೧೬ನೆಯ ಶ್ಲೋಕದಲ್ಲಿ ಮೊದಲು ದಶರಥನ ಹಿರಿಯ ಮಗ ರಾಮನಂತೆ ದೊಡ್ಡದೇವರಾಜ, ಅವನನ್ನು ಇತರ ಮೂವರು ಭಕ್ತಿಭಾವದಿಂದ ಉಪಾಸಿಸುತ್ತಾರೆ ಎಂದು ವರ್ಣಿಸಿ ೧೭ನೇ ಶ್ಲೋಕದಲ್ಲಿ ದೊಡದೇವರಾಜನ ಗುಣಗಳನ್ನು ಸಂಕ್ಷೇಪಿಸಿ ಹೇಳಿ ಮತ್ತೆ ೧೮, ೧೯ನೇ ಶ್ಲೋಕಗಳಲ್ಲಿ ಉಳಿದ ತಮ್ಮಂದಿರ ಹೆಸರು

ಸೇವಯ ಪ್ರಸ್ತಾವ ಬಂದಿದೆ. ದೊಡದೇವರಾಜನಿಗೆ ಮೊದಲು ನೀಡಿದ ವಿಶೇಷಣ ಗಳನ್ನೇ ತೆಗೆದುಕೊಂಡು ಸಮರ್ಥಿಸಿ ಅವನ ಆಳಿಕೆಯ ವರ್ಣನೆ ಮಾಡುವುದು ಶಾಸನಕಾರನ ಉದ್ದೇಶ. ಇಲ್ಲಿ ಅವನ ತಮ್ಮಂದಿರ ಪಾತ್ರ ಗೌಣ. ಆದ್ದರಿಂದಲೇ "ದಾತರಿ ದಯಾಸಮುದ್ರೇ" ಇತ್ಯಾದಿ ಮುಂದಿನ ವಿಶೇಷಣಗಳು ಹಿಂದೆ ದೊಡ ದೇವರಾಜನಿಗೆ ನೀಡಿದ "ದಾನಪರೋ ದಯಾಲುಃ" ಎಂಬ ಪೂರ್ವ ವಿಶೇಷಣಗಳ ಅನು ವಾದವೇ ಹೊರತು ದೇವರಾಜನಿಗೆ ಅನ್ವಯಿಸತಕ್ಕವಲ್ಲ ಎಂಬುದು "ರಾಘವ ಇವ" ಎಂಬ ಹೋಲಿಕೆಯ ಪದದಿಂದ ವ್ಯಕ್ತವಾಗುತ್ತದೆ. ಈ ಪದವು ಮೊದಲು ಹೇಳಿದ "ರಘೂದ್ವಹ" ಎಂಬ ಪದವನ್ನು ನೆನಪಿಸುತ್ತದೆ. ೧೭ನೇ ಶ್ಲೋಕದಲ್ಲಿ ಹೇಳಿದ ದೊಡದೇವರಾಜನ ವಿಶಿಷ್ಟ ಗುಣಗಳ ಸಮರ್ಥನೆ–ವಿಸ್ತರಣೆಗಳೇ ೨೦ ರಿಂದ ೨೬ರ ವರೆಗಿನ ಶ್ಲೋಕಗಳಲ್ಲಿ ಕಂಡು ಬಂದುದರಿಂದ ಇವೆಲ್ಲವೂ ಹಿರಿಯವನಾದ ದೊಡ ದೇವರಾಜನನ್ನು ಕುರಿತೇ ಹೇಳಿದವುಗಳೆಂಬುದು ನಿಶ್ಚಯ.

"ದಾತರಿ ದಯಾ ಸಮುದ್ರೇ" ಎಂಬಿತ್ಯಾದಿ ಶ್ಲೋಕದಲ್ಲಿ ದೇವರಾಜನ ಹೆಸರೇ ಇಲ್ಲ. ಅದ್ದರಿಂದ ಅವನಿಗೆ ಸಂಬಂಧಿಸಲು ಯುಕ್ತಿಯಿಲ್ಲ. ಇಲ್ಲಿರುವ 'ಅಮುಷ್ಮಿನ್' ಎಂಬ ಸರ್ವನಾಮ ಪದ ದೇವರಾಜನನ್ನು ಸೂಚಿಸಲು ಸಮರ್ಥವಲ್ಲ. ಆದರೆ ದೊಡ ದೇವರಾಜನನ್ನು ರಾಘವನಿಗೆ ಹೋಲಿಸಿ ಮೂವರು ತಮ್ಮಂದಿರ ವಿಚಾರವನ್ನು ಹೇಳಿದ ಮೇಲೆ ಅವನ ಗುಣಪರಾಕ್ರಮಗಳನ್ನು ಹೇಳುವುದು ಯುಕ್ತಿಯುಕ್ತವಾಗಿದೆ. ಔಚಿತ್ಯವುಳ್ಳದ್ದೂ ಅಹುದು. ಈ ಶ್ಲೋಕದಲ್ಲಿ ಬರುವ 'ಅಮುಷ್ಮಿನ್' ಎಂಬ ಸರ್ವ ನಾಮ ಪದವು ಪ್ರಯೋಗದಲ್ಲಿ ವಿಶಿಷ್ಟವಾಗಿದ್ದು ಮೂರು ಶ್ಲೋಕಗಳಷ್ಟು ದೂರದಲ್ಲಿ ಹೇಳಿದ ದೊಡದೇವರಾಜನನ್ನೇ ನಿರ್ದೇಶಿಸುತ್ತದೆ. ಈ ವಿಚಾರ ಸಂಸ್ಕೃತ ವೈಯಾಕ ರಣರಿಗೆ ವೇದ್ಯ. 'ಅಮುಷ್ಮಿನ್' ಎಂಬುದು 'ಅದಸ್' ಶಬ್ದದ ಸಪ್ತಮೀ ರೂಪ. ಇಲ್ಲಿ ಸತಿ ಸಪ್ತಮೀ ಪ್ರಯೋಗದಲ್ಲಿದೆ. ಅದಸ್ ಶಬ್ದಕ್ಕೆ ಸಂಸ್ಕೃತದ ಪ್ರಯೋಗದಲ್ಲಿ ವಿಶೇಷ ಅರ್ಥವಿದೆ. ಪ್ರಾಜ್ಞಕವಿಗಳು ಅದನ್ನು ಔಚಿತ್ಯವರಿತು ಬಳಸುತ್ತಾರೆ. ಅಂತೆಯೇ ಇಲ್ಲಿಯೂ ಬಳಕೆಯಾಗಿದೆ. ಸಂಸ್ಕೃತದಲ್ಲಿ "ಇದದ್, ಏತದ್, ಅದಸ್, ತದ್" ಎಂಬ ಸರ್ವ ನಾಮಗಳ ಅರ್ಥ ಸ್ವರೂಪವನ್ನು ತಿಳಿಯಪಡಿಸಿದ ಒಂದು ಸೂತ್ರರೂಪದ ಶ್ಲೋಕ ಹೀಗಿದೆ—"ಇದಮಃ ಪ್ರತ್ಯಕ್ಷಗತಂ ಸಮೀಪತರವರ್ತಿ ಚೈತದೋ ರೂಪಂ। ಅದಸಸ್ತು ವಿಪ್ರಕೃಷ್ಟಂ ತದಿತಿ ಪರೋಕ್ಷೇ ವಿಜಾನೀಯಾತ್॥" ಇದರ ಅರ್ಥ ಹೀಗೆ–ಇದಂ ಶಬ್ದರೂಪ ಪ್ರತ್ಯಕ್ಷ ವ್ಯಕ್ತಿಯನ್ನು ಹೇಳುವಲ್ಲಿ. ಏತದ್ ಶಬ್ದರೂಪ ಸಮೀಪದ ವ್ಯಕ್ತಿಯಲ್ಲಿ; ಅದಸ್ ಶಬ್ದದ್ದಾದರೋ ದೂರದ ವ್ಯಕ್ತಿಯನ್ನು ಹೇಳುವಲ್ಲಿ, ಮತ್ತು ತದ್ ಶಬ್ದ ರೂಪವು ಪರೋಕ್ಷ ವ್ಯಕ್ತಿಯನ್ನು ಹೇಳುವಲ್ಲಿ ಬರುತ್ತದೆಂದು ತಿಳಿದುಕೊಳ್ಳಬೇಕು. ಮೇಲಿನ ಸರ್ವನಾಮ ಪ್ರಯೋಗ ನಿಯಮದ ಪ್ರಕಾರ 'ಅಮುಷ್ಮಿನ್' ಎಂಬ ಸರ್ವನಾಮವು ಪ್ರಕೃತ ಶಾಸನ ಪದ್ಯದಲ್ಲಿ ದೊಡ

ದೇವರಾಜನಿಗೇ ಸಂಬಂಧವುಳ್ಳದ್ದು. ಆದ್ದರಿಂದ ೨೦ನೇ ಶ್ಲೋಕದ ಕನ್ನಡ ಅನುವಾದದಲ್ಲಿ ರೈಸ್ ಸಾಹೇಬರ ಅನುವಾದದಂತೆ "ದೇವರಾಜನು ದಾತೃ" ಎಂಬ ವಿವರಣೆ ನೀಡಿದುದು ಸಮ್ಮತವಲ್ಲವೆಂಬುದು ಮೇಲಿನ ಯುಕ್ತಿ ಪ್ರಮಾಣಗಳಿಂದ ಸ್ಪಷ್ಟವಾಗುತ್ತದೆ.

ರೈಸ್ ಸಾಹೇಬರು ಹಾಗೂ ಅವರನ್ನನುಸರಿಸಿದವರು ೨೭ನೇ ಶ್ಲೋಕವನ್ನು ಅರ್ಥೈಸುವಲ್ಲಿ ಉಂಟಾದ ಪ್ರಮಾದವೂ ಹಿಂದಿನ ಶ್ಲೋಕಗಳನ್ನು (೨೦ ರಿಂದ ೨೬ರ ವರೆಗೆ) ದೇವರಾಜನಿಗೆ ಅನ್ವಯಿಸಲು ಒಂದು ಕಾರಣವಿರಬೇಕು. ರೈಸರು ಈ ೨೭ನೇ ಶ್ಲೋಕಕ್ಕೆ ಕೊಟ್ಟ ಅರ್ಥ–"The son of his eldest brother Dodda Deva Raja was the generous Chikka Devendra, giving pleasure like upendra" ಎಂದೂ ಡಾ॥ ಶಾಸ್ತ್ರಿಗಳು ಮಾಡಿದ ಅನುವಾದ "ಈತನ (ದೇವರಾಜನ) ದೊಡ್ಡಣ್ಣದೊಡ್ಡದೇವರಾಜನ ಮಗ ಚಿಕದೇವೇಂದ್ರ. ಈತ ಉಪೇಂದ್ರನಂತೆ ಸಂತೋಷ ದಾಯಕನಾಗಿದ್ದನು" ಎಂದಾಗಿದೆ. ಇಲ್ಲಿ ಅನುವಾದಕರು "ಅಸ್ಯ" ಎಂಬ ಪದವನ್ನು ಪ್ರಧಾನವಾಗಿ ಗ್ರಹಿಸಿಕೊಂಡುದೇ ಅರ್ಥವ್ಯತ್ಯಾಸಕ್ಕೆ ಮೂಲವಾಯಿತು. ಆದ್ದರಿಂದ ಅವನ್ನು ಹೀಗೆ ಅನ್ವಯಗೊಳಿಸಬೇಕಾಗಿದೆ—ಅಗ್ರಜನ್ಮನಃ, ಅಸ್ಯ, ದೊಡದೇವ ರಾಜಸ್ಯ, ನಂದನಃ, ಉದಾರಃ, ಚಿಕದೇವೇಂದ್ರಃ, ಉಪೇಂದ್ರ ಇವ, ನಂದತಿ.

ಇಲ್ಲಿ 'ಅಸ್ಯ' ಎಂಬ ಸರ್ವನಾಮವು 'ದೊಡ ದೇವರಾಜಸ್ಯ' ಎಂಬ ಮುಖ್ಯ ಪದಕ್ಕೆ ವಿಶೇಷಣವಾಗುತ್ತದೆ ಹೊರತು ಮುಖ್ಯ ಪದವಲ್ಲ, (ಅಸ್ಯ = ಈ. ದೊಡ ದೇವರಾಜಸ್ಯ = ದೊಡದೇವರಾಜನ)

[೨೭ನೆಯ ಶ್ಲೋಕ–ಅಸ್ಯಾಗ್ರ ಜನ್ಮನೋ ದೊಡ್ಡದೇವರಾಜಸ್ಯ ನಂದನಃ ।
ಉದಾರಶ್ಚಿಕ ದೇವೇಂದ್ರಃ ಉಪೇಂದ್ರ ಇವ ನಂದತಿ ॥

ಇಲ್ಲಿ ಬರುವ ಅಗ್ರಜನ್ಮನಃ ಎಂಬ ಪದಕ್ಕೆ ಕನ್ನಡದಲ್ಲಿ "ದೊಡ್ಡಣ್ಣ" ಎಂದು ಅರ್ಥ ನೀಡಿದುದೂ ಸರಿಯಲ್ಲ. 'ಅಗ್ರಜನ್ಮಾ' ಎಂಬುದಕ್ಕೆ ಅಣ್ಣ ಎಂಬ ಅರ್ಥವಿದೆಯಾದರೂ ಇಲ್ಲಿ ಪೂರ್ವಜ (ಮೊದಲು ಹುಟ್ಟಿದವನು. ಹಿರಿಯ) ಎಂದು ಅರ್ಥ ಮಾಡುವುದು ಹೆಚ್ಚು ಸಮಂಜಸ. ಆಗ ಹಿರಿಯನಾದ ದೊಡ್ಡದೇವರಾಜನ ಮಗ ಚಿಕದೇವೇಂದ್ರ ಎಂಬ ಶಾಸನ ಕರ್ತನು ಬಯಸಿದ ಅರ್ಥ ಬರುತ್ತದೆ.

ಪ್ರಸ್ತುತ ಶಾಸನ ವಿಮರ್ಶೆಯಲ್ಲಿ (ಶಾಸನಪಾಠ ಪುಟ ೨೧) ಮಾನ್ಯ ಡಾ॥ಟಿ.ವಿ. ವೆಂಕಟಾಚಲ ಶಾಸ್ತ್ರಿಗಳು "ಚಿಕದೇವರಾಜನ ವಿಜಯ ವರ್ಣನೆಯಲ್ಲಿ ಒಂದು ಸಂದಿಗ್ಧವಾದ ಭಾಗವಿದೆ. ಪ್ರಸ್ತುತ ಪತ್ರಶಾಸನದಲ್ಲಿ ಮಧುರೆ ನಾಯಕನನ್ನು ದೇವರಾಜ ಸೋಲಿಸಿದನೆಂದು ನಿರೂಪಣೆಯಿದ್ದು ರೈಸ್ ಅವರ ಅನುವಾದದಲ್ಲಿ ಹಾಗೇ ಇದೆ"

ಎಂದು ಮುಂತಾಗಿ ತಿಳಿಸಿದ್ದಾರೆ (ಶಾಸನಪಾಠದ ಪುಟ ೨೧ರ ೫ನೇ ಪಾರವನ್ನು ಗಮನಿಸಿರಿ). ಆದರೆ ೨೦ ರಿಂದ ೨೬ನೇ ಶ್ಲೋಕ ವಿಷಯಗಳನ್ನು ದೇವರಾಜನಿಗೆ ಅನ್ವಯಿಸಿದಾಗ ಮೇಲೆ ಎತ್ತಿದ ಸಂದೇಹವನ್ನು ತಕ್ಕಮಟ್ಟಿಗೆ ನೀಗಬಹುದಲ್ಲವೇ ? ದೊಡ ದೇವರಾಜನ ವಿಜಯ ಅವನ ಅಧಿಕಾರದಲ್ಲಿದ್ದಾಗ ಅವನ ಮಗ ಚಿಕದೇವರಾಜನ ದಂಡ ನಾಯಕತ್ವದಲ್ಲಿ ಆಗಿರಬಹುದಾದ್ದರಿಂದ ಶಾಸನಕರ್ತೃವಿನ ಹೇಳಿಕೆಯಿಂದ ಇತಿಹಾಸ ಸಂಗತಿಗೆ ಬಾಧೆಯಿಲ್ಲವಷ್ಟೇ ? ದಂಡನಾಯಕನ ವಿಜಯವು ರಾಜನಿಗೇ ಸಲ್ಲುತ್ತದೆಯಲ್ಲವೇ ? ಚರಿತ್ರಕಾರರಲ್ಲಿ ಚಿಕದೇವರಾಜನು ಮಧುರೆಯ ನಾಯಕನನ್ನು ಸೋಲಿಸಿದ್ದು ರಾಜ್ಯ ಸಿಂಹಾಸನವನ್ನೇರಿದ ಮೇಲೋ ಅಥವಾ ಯುವರಾಜನಾಗಿದ್ದಾಗಲೋ ಎಂಬ ನಿರ್ಣಯವಾಗದಿದ್ದುದರಿಂದ ಈ ಶಾಸನವು ಚಿಕದೇವರಾಜನು ತಂದೆಯ ಆಡಳಿತ ಕಾಲದಲ್ಲೇ ಸೋಲಿಸಿದ್ದೆಂದು ತಿಳಿಯಲು ಸಾಧನವಾಗಬಹುದಲ್ಲವೇ ? ಇತಿಹಾಸಜ್ಞರು ಈ ಕುರಿತು ಗಮನಿಸಲೆಂದು ಆಶಿಸುತ್ತೇನೆ.

(ಈ ಲೇಖನ ಮೂಡಿಬರಲು ಪ್ರೇರಣೆ ನೀಡಿದ ಮಾನ್ಯ ಡಾ॥ ಟಿ. ವಿ. ವೆಂಕಟಾಚಲ ಶಾಸ್ತ್ರಿ, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು. ಇವರಿಗೆ ಲೇಖಕನು ಋಣಿ).

# ರನ್ನನ 'ಅಜಿತ ತೀರ್ಥಕರ ಪುರಾಣತಿಲಕ' : ಐತಿಹಾಸಿಕ ಆಕರ

---

**ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ**

ರನ್ನ ಕವಿಯು 'ಗದಾಯುದ್ಧ'ದ ಇತಿಹಾಸಾಂಶಗಳನ್ನು ಪ್ರತ್ಯೇಕವಾಗಿ ಪ್ರಸ್ತಾವಿಸಿ, ಸ್ವಲ್ಪ ಮಟ್ಟಿಗೆ ವಿಶ್ಲೇಷಿಸಿ ಆರ್. ನರಸಿಂಹಾಚಾರ್ಯರು ಈಗ್ಗೆ ೮೦ ವರ್ಷಗಳ ಹಿಂದೆಯೇ ಒಂದು ಲೇಖನವನ್ನು ಪ್ರಕಟಿಸಿದ್ದಾರೆ (1A., 40. 1911). ಆದರೆ ಇಂತಹ ಒಂದು ಲೇಖನ 'ಅಜಿತ ಪುರಾಣ' (= ಅಜಿಪು.) ವನ್ನು ಕುರಿತ ಹಾಗೆ ಪ್ರಕಟವಾಗಿರುವುದು ನನ್ನ ಗಮನಕ್ಕೆ ಬಂದಿಲ್ಲ. ಅದರಿಂದಾಗಿ ಈ ಪ್ರಯತ್ನ :

ಅಜಿತ ಪುರಾಣದ ರಚನಾಕಾಲ ಕ್ರಿ.ಶ. ೯೯೩ ಎಂಬುದರಿಂದ (೧೨–೫೪). ಗ್ರಂಥದೊಳಗೆ ಪ್ರಸ್ತಾವಗೊಂಡಿರುವ ಐತಿಹಾಸಿಕ ವಿದ್ಯಮಾನಗಳೂ ವಿವರಗಳೂ ಆ ಪೂರ್ವದವು ಎಂಬುದು ವಿದಿತವೇ ಇದೆ. ರಾಜಕೀಯವಾಗಿ ಇಲ್ಲಿ ಕಲ್ಯಾಣ ಚಾಲುಕ್ಯ ಮನೆತನದ ಇಮ್ಮಡಿ ತೈಲಪನ (೯೭೩–೯೭) ಆಡಳಿತಾವಧಿಯ ವಿದ್ಯಮಾನಗಳನ್ನೇ ಕುರಿತಿದೆಯೆಂದು ಸಾಮಾನ್ಯವಾಗಿ ಹೇಳಬಹುದು. ಅವಕ್ಕೆ ಹೊಂದಿಕೊಂಡು ಪ್ರಾಸಂಗಿಕವಾಗಿ ರಾಷ್ಟ್ರಕೂಟ, ಗಂಗ, ಶಿಲಾಹಾರ, ಪರಮಾರ, ಚೋಳ ಮೊದಲಾದ ಮನೆತನಗಳಿಗೆ ಸಂಬಂಧಿಸಿದ ಪ್ರತ್ಯಕ್ಷ, ಅಪ್ರತ್ಯಕ್ಷ ಉಲ್ಲೇಖಗಳು ಇಲ್ಲಿ ಕಂಡು ಬಂದಿದ್ದು. ಆಯಾ ಮನೆತನದ ಇತಿಹಾಸವನ್ನು ಪರಿಷ್ಕಾರವಾಗಿ ತಿಳಿಯಲು ಇವು ಸ್ವಲ್ಪ ಸಹಾಯ ಮಾಡತಕ್ಕವಾಗಿವೆ. ಇತಿಹಾಸಕಾರರು ಆ ಸಹಾಯವನ್ನು ಪಡೆದೂ ಇದ್ದಾರೆ. ಹೀಗಿದ್ದು ಸಹ, ರನ್ನನ ಎರಡೂ ಕೃತಿಗಳ ಇತಿಹಾಸಾಂಶಗಳ ವಿಶ್ಲೇಷಣೆ ಇನ್ನೂ ಪೂರ್ತಿಯಾಗಿ ಸಾಧ್ಯವಾಗಿಲ್ಲ. ಇದಕ್ಕೆ ಬಹುಶಃ ಕಾರಣ, ಆ ಕೃತಿಗಳಲ್ಲಿ ಬಂದಿರುವ ಉಲ್ಲೇಖಗಳ ಅಸಮಗ್ರತೆ ಹಾಗೂ ಅಸ್ಪಷ್ಟತೆ. ಉಪಯುಕ್ತ ಆಕರಗಳು ಹೆಚ್ಚಾಗಿ ದೊರೆತಲ್ಲದೆ ಆ ವಿಶ್ಲೇಷಣೆ ತೃಪ್ತಿಕರವಾಗಿ ಆಗದು.

ಒಂದು ಸ್ವಾರಸ್ಯವಾದ ಸಂಗತಿಯೆಂದರೆ : ಅಜಿತಪುರಾಣದ ಇತಿಹಾಸಾಂಶಗಳ ಅಕ್ಷ ಕೇಂದ್ರ ಅತ್ತಿಮಬ್ಬೆ ಎನ್ನುವುದು. ಈಕೆ ಆ ಕಾಲದ ಗಣ್ಯ ಇತಿಹಾಸ ವ್ಯಕ್ತಿ : ರನ್ನನ ಒಬ್ಬ ಆಶ್ರಯದಾತೃ. ಈಕೆಯ ಗುಣಶೀಲಗಳ ವರ್ಣನೆಯ ಪ್ರಭಾವಳಿಯಾಗಿಯೇ ಅಜಿತಪುರಾಣದ ಇತಿಹಾಸಾಂಶಗಳು ಅಲೆಯಲೆಯಾಗಿ ಹರಡುತ್ತ ಹೋಗುತ್ತವೆ. ಈಕೆಯ ಜೀವನ ಸಾಧನೆಗಳ ಕೆಲವು ವಿವರಗಳು ಈ ಗ್ರಂಥದ ಆದ್ಯಂತ ಭಾಗಗಳಲ್ಲಿ ಬಂದಿವೆ : ಬಂದಿವೆಯೆನ್ನುವುದಕ್ಕಿಂತ ಮನೋಜ್ಞವಾಗಿ ಅರಳಿ

ಪರಿಮಳಿಸಿವೆ ಎನ್ನುವುದೇ ಸರಿಯಾದುದು. ಇವು ಈಕೆಯ ಪ್ರಸ್ತಾವವಿರುವ ಲಕ್ಕುಂಡಿ ಶಾಸನ (BKI. I-i, 52/53 ; 1007), ಬ್ರಹ್ಮಶಿವನ 'ಸಮಯ ಪರೀಕ್ಷೆ' (೧. ೩೮–೪೦). ಶ್ರವಣಬೆಳ್ಗೊಳದ ವಿಷ್ಣುವರ್ಧನನ ಕಾಲದ ಶಾಸನ (EC. II, 82/73 ; 1118), ಇಮ್ಮಡಿ ಬಲ್ಲಾಳನ ಕಾಲದ ಶಾಸನ (EC. II, 444/327 ; 1181), ಚಾಲುಕ್ಯ ವಿಕ್ರಮಾದಿತ್ಯನ ಕಾಲದ ಶಾಸನ (EC. II, 532/384 ; 12ನೆಯ ಶ.) ಮೊದಲಾದವುಗಳಲ್ಲಿಯ ಸಂಗತಿಗಳನ್ನೂ ವಿವರಗಳನ್ನೂ ಪೋಷಿಸುತ್ತವೆ. ಜೊತೆಗೆ, ಪೊನ್ನನ 'ಶಾಂತಿಪುರಾಣ'ದ ಒಂದು ಮಾತೃಕೆಯ ಕೊನೆಯಲ್ಲಿ ಬರುವ, ಅತ್ತಿಮಬ್ಬೆ ಆ ಗ್ರಂಥದ ಸಹಸ್ರ ಪುಸ್ತಕಗಳನ್ನು ಮಾಡಿಸಿದಳೆಂಬ ಮಾಹಿತಿಯನ್ನೂ ಇಲ್ಲಿ ಸೇರಿಸಿಕೊಳ್ಳಬಹುದು. ಅದೇ ಗ್ರಂಥದ ಆರಂಭ ಭಾಗದಲ್ಲಿ ಬಂದಿರುವ ಈಕೆಯ ಮನೆತನದ ಹಿರಿಯರ ವಿಚಾರವನ್ನು ಈಕೆಯ ಚರಿತ್ರೆಗೆ ಪೂರ್ವ ಪೀಠಿಕೆಯನ್ನಾಗಿ ತಿಳಿಯಲವಕಾಶವಿದೆ.

ಅಜಿತ ಪುರಾಣದಲ್ಲಿ ಅತ್ತಿಮಬ್ಬೆಯ ವೃತ್ತಾಂತ ವೆಂಗಿ ಮಂಡಲದ ಸಾಮಾನ್ಯ ಹಾಗೂ ಶಬ್ದಾರ್ಥ ಚಮತ್ಕಾರದ ವರ್ಣನೆಯಿಂದ ತೊಡಗುತ್ತದೆ. ಕೃಷ್ಣಾ ಗೋದಾವರೀ ನದಿಗಳ ನಡುವೆ ಪೂರ್ವ ಸಮುದ್ರದ ಕರೆಯ ತನಕ ಮುಟ್ಟಿದ್ದ ಹಾಗೂ ಪಶ್ಚಿಮಕ್ಕೆ ಪೂರ್ವ ಘಟ್ಟಗಳೇ ಮೇರೆಯಾಗಿದ್ದ ವಿಸ್ತಾರವಾದ ನಾಡು ವೆಂಗಿ ಮಂಡಲ. ಇದರಲ್ಲಿ ಕಮ್ಮೆನಾಡು ಎನ್ನುವುದು ಈಗಿನ ಆಂಧ್ರ ಪ್ರದೇಶದ ಅನಂತಪುರ ಚಿತ್ತೂರು ಮೊದಲಾದ ಪ್ರದೇಶಗಳನ್ನು ಒಳಗೊಂಡಿತ್ತು. ಈ ಕಮ್ಮೆನಾಡಿನ ಪುಂಗನೂರು, ನಮ್ಮ ಈಗಿನ ಕರ್ನಾಟಕದ ಗಡಿಯ ಅನಂತಪುರ ಜಿಲ್ಲೆಯ ಪುಂಗನೂರು ಎಂದು ತಿಳಿಯಲಾಗಿದೆ. ಈ ಸ್ಥಳದವರು ಅತ್ತಿಮಬ್ಬೆಯ ತವರು ಮನೆಯವರು. ಮನೆತನದ ಹಿರಿಯ ಕೌಂಡಿನ್ಯಗೋತ್ರದ ಜೈನ ಬ್ರಾಹ್ಮಣನಾದ ನಾಗಮಯ್ಯ (ನಾಗಮ). ಈತನ ಇಬ್ಬರು ಗಂಡು ಮಕ್ಕಳು ಮಲ್ಲಪಯ್ಯ ಮತ್ತು ಪೊನ್ನಮಯ್ಯ. ಜಿನಚಂದ್ರ ಮುನಿಯ ಶಿಷ್ಯರಾದ ಇವರು ತಮ್ಮ ಗುರುವಿನ ಪರೋಕ್ಷದಲ್ಲಿ, ಆತನ ನೆನಪಿಗಾಗಿ ಪೊನ್ನ ಕವಿಯಿಂದ 'ಶಾಂತಿಪುರಾಣ'ವನ್ನು ಬರೆಯಿಸಿದರು. ಈ ಸೋದರರು ಇಮ್ಮಡಿ ತೈಲಪನ ಆಶ್ರಯದಲ್ಲಿ ಅಪ್ಪರಾದ ಅಧಿಕಾರಿಗಳಾಗಿದ್ದರೆಂದು. ಮುಖ್ಯವಾಗಿ ಆತನ ಯುದ್ಧೋದ್ಯೋಗಗಳಲ್ಲಿ ಒದಗುತ್ತಿದ್ದವರೆಂದು ತಿಳಿಯಬಹುದಾಗಿದೆ. ಇವರ ವೈಯಕ್ತಿಕ ಗುಣ ವಿಶೇಷಗಳನ್ನೂ ಸೋದರ ಭಾವವನ್ನೂ ಪೊನ್ನ ರನ್ನರಿಬ್ಬರೂ ಅತಿಶಯವಾಗಿ ಕೀರ್ತಿಸಿದ್ದಾರೆ. ಇವರಲ್ಲಿ ಹಿರಿಯನಾದ ಮಲ್ಲಪಯ್ಯನ ರಾಜನೀತಿಜ್ಞತೆ, ಜ್ಯೋತಿಶ್ಶಾಸ್ತ್ರಜ್ಞತೆ, ಅಶ್ವಗಜ ಶಾಸ್ತ್ರಜ್ಞತೆಗಳನ್ನು, ಕವಿ-ವಿದ್ವಜ್ಜನ ದಾತೃತ್ವವನ್ನು ರನ್ನ ವಿಶೇಷವಾಗಿ ಸ್ಮರಿಸಿದ್ದಾನೆ.

ಶೂರನಾದ ಮಲ್ಲಪಯ್ಯನು ತನ್ನ ಸ್ವಾಮಿಯ ಪರವಾಗಿ ನಡೆದ ಒಂದು

ಯುದ್ಧದಲ್ಲಿಪ್ರವರ್ಶಿಸಿನ ಸಾಹಸದ ವರ್ಣನೆ ಅಜಿಪು.ದಲ್ಲಿ ವಿಶೇಷವಾಗಿ ಗಮನಿಸ ತಕ್ಕುದು :

ಪಡೆವೆಂ ಪುತ್ರನನೊರ್ವನಂ ಪಡೆವೆನಾನೊಂದೇ ಸಿಸಕ್ಕುಂ ಜಯಂ
ನುಡಿವೆಂ ಕೇಳ್ವಿರಿಮೆಂದು ಮುನ್ನಜಿಪಿ ತತ್ತದ್ವಿದ್ಯನಾಚಾರದೊಳ್
ಗುಡಿಯುಂ ಕಟ್ಟಿ ಕುಮಾರ ಲೋಧ್ರ ಸಮರ ಪ್ರಾರಂಭದೊಳ್ ಬಲ್ಮೆ ನೇ
ರ್ಪಡೆ ಭೂವಲ್ಲಭನಂ ಮನಂಗೊಳಿಸಿದಂ ಶೌರ್ಯೋರ್ಜಿತಂ ಮಲ್ಲಪಂ ॥(೧-೩೦)

ಮಲ್ಲಪಯ್ಯನು ಪ್ರಭು ತೈಲಪನಿಗೆ ತಾನು ಮನೆ ಮಗನಾಗುವುದಾಗಿ ಸಾರಿ, ಅಂಕಕಾರನಂತೆ ಸಂಕಲ್ಪಿಸಿದ ಸಂದರ್ಭವಿದು. ಒಂದೇ ಬಾಣ ಪ್ರಯೋಗದಲ್ಲಿ ಜಯ ಗಳಿಸುವ ಸಂಕಲ್ಪ ಆತನದು. ಹಾಗೆ ಹೋರಾಡಲು ಸಂಕಲ್ಪಿಸಿ ಪ್ರತಿಜ್ಞಾ ಬದ್ಧನಾದ ಸಂನಿವೇಶ ಯಾವುದು ? "ಕುಮಾರ ಲೋಧ್ರ ಸಮರ"ವೇ ಅದು.

'ಕುಮಾರ ಲೋಧ್ರ ಸಮರ' ಎಂಬುದು ಏನು ಹೇಳುತ್ತದೆ, ಸ್ಪಷ್ಟವಿಲ್ಲ. ಈ ಬಗ್ಗೆ ಪ್ರತ್ಯೇಕವಾಗಿ ವಿಚಾರ ಮಾಡಿರುವ ಪಿ. ಬಿ. ದೇಸಾಯಿ "ಕುಮಾರ ಎಂದರೆ ರಾಜಕುಮಾರ. ಪಟ್ಟವೇರದ ರಾಜಪುತ್ರನನ್ನು ಸಂಕ್ಷೇಪವಾಗಿ ಕುಮಾರ ಎಂದು ಕರೆಯುವ ಪಾಡಿಕೆ ಆ ಕಾಲದಲ್ಲಿದ್ದಿತು. ಈ ಕುಮಾರನಾದರೋ, ಅದೇ ಆ ಚಾಲುಕ್ಯ ರಾಜಪುತ್ರ ಇಮ್ಮಡಿ ತೈಲಪ. ಆತನಿಗೆ ಇನ್ನೂ ರಾಜ ಪದವಿ ಬಂದಿರಲಿಲ್ಲ: ಅವಾಗ ಆತನು ಚಾಲುಕ್ಯರ ಸ್ವತಂತ್ರ ರಾಜ್ಯ ಸ್ಥಾಪನೆಯ ಉದ್ಯೋಗವನ್ನು ಆರಂಭಿಸಿದ ಕಾಲ" ಎಂದು ಮುಂತಾಗಿ ತಿಳಿಸಿ, ಮುಂದುವರಿದು ಹೀಗೆಂದಿದ್ದಾರೆ : "ಲೋಧ್ರ ಎಂಬುದು ವನಸ್ಪತಿ ವಿಶೇಷ, ಇಷ್ಟೆ. ಅದರ ಹೂವಿನ ಬಣ್ಣ ಕೆಂಪು. ಬಿಳಿ ಹೂವಿನ ಜಾತಿಯೂ ಇದೆ ; ಅದು ಇಲ್ಲಿ ಅಭಿಪ್ರೇತವಲ್ಲ. ಇಂತು 'ಲೋಧ್ರ ಸಮರ, ಎಂದರೆ ರಕ್ತಸಂಗ್ರಾಮ. ಭೀಕರ ಕಾಳಗ ; Sanguinary War ಎಂದ ಹಾಗೆ. 'ಕುಮಾರ ಲೋಧ್ರ' ಎಂಬುದು ಸ್ಥಳನಾಮವಾಗಲಾರದು : ಏಕೆಂದರೆ ಇದು ಚೋದ್ಯವಾದ ಹೆಸರು."

ದೇಸಾಯಿಯವರ ಸೂಚನೆ ವಿಚಾರಯೋಗ್ಯವಾದ್ದು. 'ಕುಮಾರ' ಎಂದರೆ ನೊಳಂಬರು ಇಟ್ಟುಕೊಂಡಿರುತ್ತಿದ್ದ ಅಂಕಕಾರ ಅಥವಾ ಲೆಂಕನನ್ನು ಕುರಿತ ಮಾತೆಂದೂ ಇಂತಹ ಕುಮಾರರು ಅವರ ಮೂಲಬಲವಾಗಿ ಇರುತ್ತಿದ್ದರೆಂದೂ ನೊಳಂಬರು ಇಮ್ಮಡಿ ತೈಲಪನ ಅಧೀನತೆಯನ್ನು ಒಪ್ಪಿದ ಮೇಲೆಯೂ ಈ ಆಶಯ ಹಾಗೆಯೇ ಸಾಗಿರಬಹುದೆಂದೂ ಇನ್ನೊಂದು ಸೂಚನೆಯುಂಟು. ಆದರೆ ಇಲ್ಲಿ ನಿಷ್ಕರ್ಷೆ ಕಷ್ಟವೆಂದು ಈ ಸೂಚನೆಗಳನ್ನು ಗಮನಿಸಿದ ಬಿ. ಆರ್. ಗೋಪಾಲ್ ಕಲ್ಯಾಣ ಚಾಲುಕ್ಯರನ್ನು ತಮ್ಮ ಪುಸ್ತಕದಲ್ಲಿ ತಿಳಿಸಿದ್ದಾರೆ. "ಕುಮರರ ಕಾಳಗದೊಳ್ ಪತಿಯ ಮುಂದೆ ತಜಿಸಂದು ನಿಂದು" ಎಂಬ ಅಜಿತಪುರಾಣದ್ದೇ ಆದ ಉಲ್ಲೇಖ

ವನ್ನು (೧-೪೨) ಲಕ್ಷಿಸಿದರೆ, 'ಕುಮಾರ' ಅಂಕಕಾರನನ್ನೇ ಹೇಳಬಹುದೇನೋ ಎನಿಸುತ್ತದೆ. ಇದು ಹೀಗಿರಬೇಕಾದರೆ 'ಕುಮಾರ' ಎಂಬ ಮಾತು 'ಪಟ್ಟವೇರದ ರಾಜಪುತ್ರ' ತೈಲಪನನ್ನೋ, ಅವನ ಮಗ ಇಜಿವ ಬೆಡಂಗನನ್ನೋ ಸೂಚಿಸುವುದು ಎಂಬುದಾಗಿ ತಿಳಿಯುವುದು ಕಷ್ಟವಾಗುತ್ತದೆ. ಆದರೆ ಅಜಿತಪುರಾಣದ ರಚನಾಕಾಲವನ್ನು ಲಕ್ಷಿಸಿ ಹೇಳುವುದಾದರೆ, ಇಜಿವ ಬೆಡಂಗ ತನ್ನ ತಂದೆಯ ಪರವಾಗಿ ಕಾದಿದ ಯಾವುದಾದರೂ ಒಂದು ಕಾಳಗ ಪೂರ್ವೋಕ್ತ ಪದ್ಯದಲ್ಲಿ ಉದ್ದೇಶಿತವಾಗಿರಬಹುದು, ಅದರಲ್ಲಿ ಮಲ್ಲಪಯ್ಯ ಹೋರಾಡಿರಬಹುದು ಎಂಬುದಾಗಿ ಊಹಿಸುವುದು ಉತ್ತಮ ಪಕ್ಷ.

ಯುವರಾಜ ಸತ್ಯಾಶ್ರಯ, ತನ್ನ ತಂದೆಯ ರಾಜ್ಯಭಾರ ಕಾಲದಲ್ಲಿಯೇ ಆತನ ಅನುಜ್ಞೆಯಂತೆ ಕೊಂಕಣ ಶಿಲಾಹಾರರು ಹಾಗೂ ಉತ್ತರದ ಗುರ್ಜರರ ಮೇಲೆ ಕಾದಿದನೆಂದು ತಿಳಿದಿದೆ. ಉತ್ತರ ಕೊಂಕಣದ ಶಿಲಾಹಾರ ಶಾಖೆಯ ೧ನೆಯ ವಜ್ಜಡನ ಮಗ ಮೃಗಾಂಕನೆನ್ನಿಸಿದ ಅಪರಾಜಿತನ (೯೭೫–೧೦೧೦) ಮೇಲೆ ಈತ ಸಾಧಿಸಿದ ವಿಜಯ 'ಗದಾಯುದ್ಧ'ದಲ್ಲಿ ವಿಶದವಾಗಿ ವರ್ಣಿತವಾಗಿದೆ (೧-೨೨, ೨೩ ; ೨-೪೭). ಹಾಗೆಯೇ 'ಅಮ್ಮನ ಗಂಧವಾರಣ'ನಾದ ಸತ್ಯಾಶ್ರಯ ಗುರ್ಜರರ ಗಜಸೈನ್ಯವನ್ನು ಎದುರಿಸಿದ್ದು ಸಹ ಅಲ್ಲಿ ಕಣ್ಣಿಗೆ ಕಟ್ಟುವಂತೆ ಬಂದಿದೆ (೧-೧೬ ; ೨-೪೭), ಆದರೆ ಈ ಎರಡೂ ಯುದ್ಧ ಸಂದರ್ಭಗಳ ಬಗೆಗೆ ಅಜಿತಪುರಾಣದಲ್ಲಿ ಒಂದು ಚಕಾರವೂ ಇಲ್ಲದಿರುವುದರಿಂದ ಇವು ಅಜಿತಪುರಾಣದ ರಚನಾಕಾಲವಾದ ೯೯೩ರ ಅನಂತರವೇ ನಡೆದಿರಬೇಕೆಂದು ತಿಳಿಯಬೇಕಾಗುತ್ತದೆ. ವಾಸ್ತವವಾಗಿ ಸತ್ಯಾಶ್ರಯ ಭಾಗವಹಿಸಿದ ಯಾವ ಕಾಳಗವನ್ನೂ ಇಲ್ಲಿ ನೇರವಾಗಿ ವರ್ಣಿಸಿಲ್ಲ. ಅಪರಾಜಿತನ ಜಂಜಿರಾ ಮತ್ತು ಭಾಧಾನದ ತಾಮ್ರ ಪಟಗಳಲ್ಲಿ (CII., Vol. vi, 5, 7) ರಾಷ್ಟ್ರಕೂಟ ನಿರುಪಮನ ಮಗ ಕಕ್ಕಲದೇವ (ಕರ್ಕ)ನು ಇಮ್ಮಡಿ ತೈಲಪನಿಂದ ನಾಶವಾದ ವಿಷಯ ಬಂದಿದ್ದು, ಆ ಎರಡು ಶಾಸನಗಳ ಕಾಲವಾದ ೯೯೩, ೯೯೭ರ ವೇಳೆಗೇ ಅದೊಂದು ಕಥೆಯಾಗಿ ಹೋಗಿತ್ತು ಎನ್ನುವುದು ಅಲ್ಲಿಯ ಮಾತಿನಿಂದಲೇ ತಿಳಿಯುವುದು. ಆದ್ದರಿಂದ ಸತ್ಯಾಶ್ರಯನ ಹೋರಾಟದ ಸಂದರ್ಭಗಳು ಇನ್ನೂ ಈಚಿನವಾಗಿರಬೇಕು. (ಈ ಸಂದರ್ಭದಲ್ಲಿ ರಾಜಪುರೋಹಿತರ ಹಾಗೂ ಲೋಕಾಪೂರರ ಚರ್ಚೆಗಳನ್ನೂ ಗಮನಿಸಬಹುದು. ಜ.ಕ. ೧೭-೩ : ಪ್ರ.ಕ. ೨೦-೪).

ಅಜಿತಪುರಾಣದಲ್ಲಿ ಮಲ್ಲಪ, ಪೊನ್ನಮಯ್ಯ ಮತ್ತು ನಾಗದೇವರೆಂಬವರ ಯುದ್ಧ ಪ್ರಸ್ತಾವಗಳುಂಟು. ಇವುಗಳಲ್ಲಿ ಮಲ್ಲಪಯ್ಯ ಅಂಕಕಾರನಾಗಿ ಸಂಕಲ್ಪಿಸಿ ತೆರಳಿದ ಕಾಳಗಗಳು ರಾಷ್ಟ್ರಕೂಟ ಕರ್ಕ, ಚೋಳರಾಜ ಉತ್ತಮ ಚೋಳ, ಪರಮಾರ ಮುಂಜ ಇವರೊಂದಿಗೆ ಇಲ್ಲವೆ ಅಂತಹ ಅನ್ಯಶತ್ರುರಾಜರೊಂದಿಗೆ ಕಾದಿದ ಯಾವುದಾದರೂ ಒಂದು ಕಾಳಗವೇ ಇದ್ದೀತು. ಇವೆಲ್ಲ ೧೦ನೆಯ ಶ.ದ ಉತ್ತರಾರ್ಧದಲ್ಲಿ ಕೈಗೂಡಿದ ಸಂದರ್ಭಗಳೆಂಬುದು ಶಾಸನಾಧಾರಗಳಿಂದ ತಿಳಿದಿದೆ.

ಮಲ್ಲಪಯ್ಯನ ತಮ್ಮ ಪೊನ್ನಮಯ್ಯನು ರಾಷ್ಟ್ರಕೂಟರ ಸಾಮಂತನಾಗಿ ಅವರ ಸುಸ್ಥಿತಿಗೆ ಹೆಣಗುತ್ತಿದ್ದ ಗಂಗರೊಂದಿಗೆ ತನ್ನ ಸ್ವಾಮಿಯಾದ ಇಮ್ಮಡಿ ತೈಲಪನ ಪರವಾಗಿ ಹೋರಾಡಿ ಪ್ರಾಣಾರ್ಪಣೆ ಮಾಡಿದ ಒಂದು ಉಲ್ಲೇಖ ಐತಿಹಾಸಿಕವಾಗಿ ಮುಖ್ಯವಾದುದು :

ಪರಮದ್ರೋಹರೊಳೊಂದಿ ತನ್ನೊಳಿಜಿಯಲ್ಗೋವಿಂದರಂ ಬರ್ಪುದುಂ
ಸೆರಗಂ ಪಾರದೆ ತಾಗಿ ತೈಲಪ ನೃಪಂ ಬಾಳ್ಗೆಂದು ಬಾಳ್ಗಿಟ್ಟು ಮ
ಚ್ಚರದಿಂ ಸಾರ್ಚಿದರಂ ಪಡಲ್ವಡಿಸಿ ಕಾವೇರೀ ಸರಿತ್ತೀರದೊಳ್
ಸುರಲೋಕಾತಿಥಿಯಾದ ಪೊನ್ನನೆ ವಲಂ ಗಂಡಂ ಪೆಜಿರ್ ಗಂಡರೇ॥ (೧-೩೬)

ಪೊನ್ನಮಯ್ಯ ಎದುರಿಸಿದ ಗೋವಿಂದರಸು ಗಂಗದೊರೆ ಇಮ್ಮಡಿ ಬೂತುಗನ (೯೩೬-೬೧) ಕಿರಿಯ ಮಗನೂ ಇಮ್ಮಡಿ ಮಾರಸಿಂಹನ (೯೬೩-೭೪) ತಮ್ಮನೂ ಆಗಿದ್ದ ನೀತಿಮಾರ್ಗ ಗೋವಿಂದರಸನೆಂಬುದು ಹುಂಚ ಶಾಸನದಿಂದ ತಿಳಿದು ಬರುತ್ತದೆ. ಮಾರಸಿಂಹನ ಅನಂತರದಲ್ಲಿ ಇವನಿಗೂ ಮಾರಸಿಂಹನ ಮಗ ನಾಲ್ವಡಿ ರಾಚಮಲ್ಲನಿಗೂ (೯೭೪-೮೫) ಗಂಗ ಸಿಂಹಾಸನಕ್ಕಾಗಿ ಸ್ಪರ್ಧೆಯೇರ್ಪಟ್ಟು, ಮಾರಸಿಂಹ ರಾಚಮಲ್ಲರ ವಿರೋಧಿಗಳಾದ ದ್ರೋಹಿಗಳ ಬೆಂಬಲ ಗಳಿಸಿಕೊಂಡು ಆ ಗೋವಿಂದ ರಸನು ತಾತ್ಕಾಲಿಕವಾಗಿ ಯಶಸ್ವಿಯಾಗಿರಬೇಕು. ರಾಷ್ಟ್ರಕೂಟರ ವಿಧೇಯ ಸಾಮಂತ ನಾಗಿದ್ದ ಮಾರಸಿಂಹನ ಹಾಗೆಯೇ ಈತನು ಸಹ ತೈಲಪನನ್ನು ಎದುರಿಸಬೇಕಾಗಿ ಬಂದ ಸಂದರ್ಭವೇನೋ ತಿಳಿಯದು. ಬಹುಶಃ ಗಂಗ ಸಿಂಹಾಸನವನ್ನು ಸ್ವಾಧೀನ ಪಡಿಸಿಕೊಂಡ ಮೇಲೆ, ತೈಲಪನ ರಾಜ್ಯ ವಿಸ್ತರಣ ಪ್ರಯತ್ನವನ್ನು ತಡೆಯುವ ಮಹತ್ವಾಕಾಂಕ್ಷೆಯೇ ಕಾರಣವಾಗಿರಲೂಬಹುದು. ಹಾಗೆ ಒದಗಿರಬಹುದಾದ ಯುದ್ಧದಲ್ಲಿ ತೈಲಪನ ಪಕ್ಷದಲ್ಲಿ ನಿಂತು ಕಾದಿದ ಪೊನ್ನಮಯ್ಯ ಕಾವೇರೀ ನದಿಯ ತೀರದ ಆ ಯುದ್ಧದಲ್ಲಿ ವೀರ ಮರಣವನ್ನು ಅಪ್ಪಿದನು. ಗಂಗ ಸಿಂಹಾಸನದ ಗಳಿಕೆಯ ಮೇಲಾಟದಲ್ಲಿ ಈ ಗೋವಿಂದರಸನ ಪ್ರಾಬಲ್ಯವನ್ನು ಕೆಲಕಾಲವಾದರೂ ಮಾರಸಿಂಹನ ಸೇನಾನಿ, ಸಂಧಿವಿಗ್ರಹಿ ಚಾವುಂಡರಾಯನು ತಗ್ಗಿಸಿದನೆಂಬುದು 'ಚಾವುಂಡರಾಯ ಪುರಾಣ'ದ ಅದ್ಯಂತ ಭಾಗಗಳ ಉಲ್ಲೇಖಗಳಿಂದ ವಿದಿತವಾಗುತ್ತದೆ (೧-೨೧ ಮತ್ತು ಪುರಾಣಾಂತ ಚಾರಿತ್ರಿಕ ಗದ್ಯ). ಅದರೆ ಮಲ್ಲಪಯ್ಯನ ಜ್ಯೇಷ್ಠಪುತ್ರ ಗುಂಡಮಯ್ಯ ತನ್ನ ಚಿಕ್ಕಪ್ಪನ ಸಾವಿನ ಸೇಡನ್ನು ತಾನು ತೀರಿಸಿಕೊಂಡ ಹಾಗೆ "ನರಸಿದ ಶೌರ್ಯದಿಂಗೀ। ನರನಂ ಪೆಸೆಗಿಜಾದು ಗೆಲ್ದು ನಿಜವಿಜಯಯಶಂ। ಪರೆಪೆ...." ಎಂಬ ಅದಿಪ್ರಾದ ಒಂದು ಮಾತಿನಿಂದ (೧-೩೯) ಗ್ರಹಿಕೆಗೆ ಬರುತ್ತದೆ. ಇಲ್ಲಿ ಉಕ್ತನಾಗಿರುವ ಗೋವಿಂದನು ಪ್ರಾಯಶಃ ನೀತಿಮಾರ್ಗ ಗೋವಿಂದರಸನೇ ಇರಬೇಕು.

ಈ ಸಂದರ್ಭದಲ್ಲಿ, ನಾಗವರ್ಮನ (೧೧೪೨) 'ಕಾವ್ಯಾವಲೋಕನ'ದೊಳಗಿನ ಎರಡು ಅಜ್ಞಾತ ಕರ್ತೃಕಗಳಾದ ಲಕ್ಷ್ಯಪದ್ಯಗಳನ್ನು ಪ್ರಾಸ್ತಾವಿಕವಾಗಿ ಗಮನಿಸಬಹುದು :

೧. ಕಱಿಮುಱಿಗಳೊಳವು ನೋಟ್ಪೊಡೆ। ಪೆಱಪೆಱರ ಕುಲಕ್ಕೆ ಕೊಂಡ
ಕೊಟ್ಟೆಡೆಗಳೊಳಂ।
ಕಱಿಯಿಲ್ಲ ತೈಲನಲ್ಲದೆ। ಪೆಱನಾವೊಂ ಪಿಕ್ಕಿ ನೋಟ್ಪೊಡಿರ್ತಲೆಗೋಱಂ॥

೨. ತೊಱ[ಗ]ಲೆ ಱಟ್ಟಪಳ್ಳಿ ನೆಗಟ್ಬಾಱರಗೋಳ ಮೆನಿಪ್ಪಗುರ್ವವೆ
ತ್ತಱಿಕೆಯ ಬೇಡವಟ್ಟುಗಳ ಬೂತುಗ ಬೀರುಗ ಗೋಯೆಯರ್ಕ[ಳುಂ]
ನೆಱಿಯರೆನಿ[ಪ್ಪ ವಂ] ಕಿಡಿಸಿಲಂಕದ ಮುನ್ನಿನ ಚಕ್ರವರ್ತಿಗಳ್
ಪೆಱರಳವಲ್ತುವಂ ಕಿಡಿಸಿತೊಟ್ಟಜೆ ತೈಲಪ ಚಕ್ರವರ್ತಿಯಾ॥

ಇವು ಕಾವ್ಯದಲ್ಲಿ ದ್ವಂದ್ವಸಮಾಸದ ಲಕ್ಷ್ಯನಿರ್ದೇಶನಾರ್ಥವಾಗಿ ಅನುಸ್ಯೂತವಾಗಿ ಉದ್ಧೃತಗೊಂಡ ಲಕ್ಷ್ಯಪದ್ಯಗಳು (ಪ. ೨೧೧, ೨೧೨). ಮೊದಲನೆಯದು ಇಮ್ಮಡಿ ತೈಲಪನ ಗುಣಾತಿಶಯವನ್ನು ಸಾಧಾರಣ ರೀತಿಯಿಂದ ಕೀರ್ತಿಸುವ ಪದ್ಯ ; ಇದು ಭಾಗಶಃ 'ಶಬ್ದಮಣಿದರ್ಪಣ'ದಲ್ಲಿಯೂ ಬೇರೆ ಸಂದರ್ಭಕ್ಕೆ ಉದ್ಧೃತಗೊಂಡಿದೆ (ಸೂ. ೭೬–೫). ಆದರೆ ಎರಡನೆಯ ಪದ್ಯದಲ್ಲಿ, ತೈಲಪ ಚಕ್ರವರ್ತಿ ತೊಱಗಲೆ ಮೊದಲಾದ ಮೂರು ಪ್ರದೇಶಗಳನ್ನು ಸಾಹಸದಿಂದ ಸ್ವಾಧೀನಮಾಡಿಕೊಂಡ ವಿಷಯ ಬಂದಿರುವ ಹಾಗೆ ತೋರುವ ರಾಜಕೀಯ ಸಾಧನೆಯ ಕಥನವೇ ಇರುವಂತಿದೆ. ರಾಷ್ಟ್ರಕೂಟರ ಮಾಂಡಲಿಕರಾಗಿದ್ದ ಗಂಗ ಬೂತುಗ, ಮಾರಸಿಂಹ ಗೋವಿಂದರು ಸಹ ಸಾಧಿಸಲು ಅಶಕ್ಯವಾಗಿದ್ದ ತೊಱಗಲೆ ಮೊದಲಾದ ಪ್ರದೇಶಗಳನ್ನು ತೈಲಪನು ಸಾಧಿಸಿದನೆಂದು ಇಲ್ಲಿ ಹೇಳುವುದು ಕವಿಯ ಉದ್ದೇಶವಿರುವಂತಿದೆ. ಮೇಲಿನ ಪದ್ಯಗಳೆರಡೂ ರನ್ನನ ಅನುಪಲಬ್ಧ 'ಚಕ್ರೇಶ್ವರ ಚರಿತ'ದಿಂದಲೋ ಮತ್ತಾವುದಾದರೂ ಕಲ್ಯಾಣ ಚಾಲುಕ್ಯಪರವಾದ ಕಾವ್ಯದಿಂದಲೋ ಆಯ್ದುಕೊಂಡವಾಗಿರಬಹುದು. ತೊಱಗಲೆ ಮೊದಲಾದ ಪ್ರದೇಶಗಳು ಬೇಡರ ಪಟ್ಟುಗಳು ಎಂದರೆ ದುರ್ಗಮವಾದ, ಬೇಡರ ಗುಂಪುಗಳ ವಸತಿಯಾಗಿದ್ದ, ದೂರಾಂತರದ ನೆಲೆಗಳು ಎಂದು ತಿಳಿಯುವುದಲ್ಲದೆ. ಇವರ ಕಿರುಕುಳ ಯುದ್ಧಗಳನ್ನು ನಿವಾರಿಸಲು ಆ ಮೊದಲಿನ ರಾಷ್ಟ್ರಕೂಟ ಚಕ್ರವರ್ತಿಗಳಿಂದಲೂ ಆಗಿರಲಿಲ್ಲ ಎಂಬುದಾಗಿ ನಮಗೆ ಅಭಿಪ್ರಾಯವಾಗುವಂತಿದೆ. ಪೂರ್ವೋಕ್ತರಾದ ಬೂತುಗ ಮೊದಲಾದವರಲ್ಲಿ ಒಬ್ಬನಾಗಿರುವ ಬೀರುಗ ಎಂಬವನು ಯಾರೆಂಬುದನ್ನು ಗುರುತಿಸಲಾಗಲಿ, ಗಂಗ ಮಾಂಡಲಿಕರಲ್ಲಿ ಅವನ ಸ್ಥಾನಮಾನಗಳು ಏನೆಂಬುದನ್ನು ತಿಳಿಯಲಾಗಲಿ ನಮಗೆ ಉಪಪತ್ತಿ ಸಾಲದು.

ಮುಲ್ಲಪಯ್ಯ ಪೊನ್ನಮಯ್ಯರ ತರುವಾಯದಲ್ಲಿ ನಾವು ಗಮನಿಸಬೇಕಾದುದು ಎಂದರೆ, ನಾಗದೇವನು ಕಾದಿದ ಕಾಳಗದ ಸಂದರ್ಭಗಳನ್ನು. ನಾಗದೇವನು ಇಮ್ಮಡಿ ತೈಲಪನ ಮಹಾಮಂತ್ರಿ ದಲ್ಲಪನ ಮಗ. ಈ ದಲ್ಲಪನನ್ನು ಅಜಿಪು.ದಲ್ಲಿ ತುಂಬ ಗೌರವದಿಂದ "ಸಚಿವೋತ್ತಮನುತ್ತಮ ಜಾತಿಯುಂ ಸಕಲಚಕ್ರವರ್ತಿಯ ಸಭಾ ಸಂವಾಸ ಚತುರನುಂ ಚತುರುಪಧಾವಿಶುದ್ಧನುಂ" ಆದ ಮಹಾಮಂತ್ರಿಯೆಂಬುದಾಗಿ ಗುರುತಿಸಿದೆ (೧–೩೮ ವ.) ಈ ದಲ್ಲಪನ ಪ್ರಭಾವ, ಶೌರ್ಯಾತಿಶಯಗಳ ಬಗೆಗೆ ೧೦೦೭ರ ಲಕ್ಕುಂಡಿ ಶಾಸನದಲ್ಲಿಯೂ ಪ್ರಸ್ತಾವವಿದೆ. ಇಲ್ಲಿ 'ಆಹವಮಲ್ಲ ಭುಜಾ ದಂಡ'ನೆನಿಸಿದ ಈತ ಕೊಂಕಣ, ವೆಂಗಿ, ತಿಗುಳ ಮತ್ತು ಮಾಳವರ ಮೇಲೆ ನಡೆದ ಯುದ್ಧಗಳಲ್ಲಿ ತೈಲಪನ ಪರವಾಗಿ ನಿಂತು ಹೋರಾಡಿದುದನ್ನು ಪರೋಕ್ಷವಾಗಿ ಸೂಚಿಸಿದೆ. ಈತ ತೈಲಪನ ಪ್ರಬಲನಾದ ಬೆಂಬಲಿಗ: ಈತ ಶಿಲಾಹಾರರು, ಚೋಳರು ಮೊದಲಾದವರನ್ನು ಎದುರಿಸುವಲ್ಲಿ ತನ್ನ ಪ್ರಭುವಿಗೆ ಬಹುವಾಗಿ ಸಹಾಯವಾಗಿರ ಬೇಕೆಂದು ಇದರಿಂದ ತಿಳಿಯಬಹುದಾಗಿದೆ. ಈ ಬಗ್ಗೆ ಅಜಿಪು.ದಲ್ಲಿ ಯಾವ ಸ್ಪಷ್ಟವಾದ ಉಲ್ಲೇಖವೂ ಇಲ್ಲ. ರಾಷ್ಟ್ರಕೂಟ ಅಧಿರಾಜತ್ವವನ್ನು ತೈಲಪನು ಪ್ರತಿಘಟಿಸಿ ಕೈಕೊಂಡ ಹೋರಾಟದ ಆರಂಭದ ದಿನಗಳಲ್ಲಿ ದಲ್ಲಪನು ಹೆಚ್ಚಾಗಿ ಆತನಿಗೆ ಸಹಾಯವಾಗಿರಬಹುದು. ಪ್ರಭುವಿನ ಪರಮವಿಶ್ವಾಸವನ್ನು ಸಂಪಾದಿಸಿದವನೂ ಮಹಾಮಂತ್ರಿಯಾಗಿ ಕಾರ್ಯನಿರ್ವಹಿಸಿದವನೂ ಆದ ಈತನ ಮಗ ನಾಗದೇವ ತೈಲಪನ ಸೇನಾಪತಿಯಾಗಿ ಅನಂತರದ ಕಾಳಗಗಳಲ್ಲಿ ದೊರೆಗೆ ಸಹಾಯವಾದುದರಲ್ಲಿ ಯಾವ ಅತಿಶಯವೂ ಇಲ್ಲ. ಪೂರ್ವೋಕ್ತ ಶಾಸನದಲ್ಲಿ ಈತನ ಅತಿರಂಜಿತ ಶೌರ್ಯವರ್ಣನೆಯ ಜೊತೆಗೆ ಆಂಧ್ರ, ಮಗಧ, ಲಾಳ, ಖಸ, ಪಾಂಡ್ಯ ಪ್ರಭುಗಳೊಂದಿಗೆ ನಡೆದ ಯುದ್ಧಗಳಲ್ಲಿ ಈತ ಭಾಗವಹಿಸಿದ ಸಾಧ್ಯತೆಯನ್ನು ಪರೋಕ್ಷವಾಗಿ ಉಲ್ಲೇಖಿಸಿರುವುದೂ ಉಂಟು. ಇದರಲ್ಲಿ ಕೊಂಚ ಭಾಗ ಕೇವಲ ಅಲಂಕಾರಿಕ ವರ್ಣನೆಯೆಂದೇ ಕಾಣುತ್ತದೆ.

ಅಜಿತ ಪುರಾಣದಲ್ಲಿ ನಾಗದೇವನು ಪ್ರದರ್ಶಿಸಿದ ಶೌರ್ಯದ ಮೂರು ಗಮನಾರ್ಹ ಯುದ್ಧ ಸಂದರ್ಭಗಳು ಹೀಗಿವೆ: ೧. ಕುಮರರ ಕಾಳಗ, ೨. ಪಂಚಲನೆಂಬವನನ್ನು ಎದುರಿಸಿದ್ದು ೩. ಕರಹಟದಿಂದ ಮಲ್ಲನೆಂಬವನನ್ನು ತರುಬಿದ್ದು.

ಕುಮರರ ಕಾಳಗದೊಳ್ ಪತ್ತಿ
ಯ ಮುಂದೆ ತಟ್ಟಿಸಂದು ಸಿಂದು ಕಡಿತಲೆಗೊಂಡ
ಸ್ಯ ಮತಂಗಜಂಗಳಂ ವಿ
ಕ್ರಮಿಸಿಯುಂ ದಲ್ಲನಾದನಂ ಪೊಣರ್ದುಜಯಿಸಿದಂ ॥ (೭–೪೨)

–ಎಂಬಲ್ಲಿ ಹೇಳಲಾದ 'ಕುಮರರ ಕಾಳಗ'. ರಾಜಪುತ್ರರ ನಡುವಣ ಕಾಳಗವೋ

ಅಂಕಕಾರರು ಪ್ರಭುವಿಗಾಗಿ ಹೊಯ್ದಾಡಿದ ಕಾಳೆಗವೋ, ಸಂದರ್ಭ ಸ್ಪಷ್ಟವಿಲ್ಲ. ಈಗಾಗಲೇ ಗಮನಿಸಿದ 'ಕುಮಾರಲೋಧ್ರಸಮರ'ದೊಂದಿಗೆ ಇದರ ಸಂಬಂಧವುಂಟೇ ಎಂಬುದೂ ಸ್ಪಷ್ಟವಿಲ್ಲ. ಅಂಕಕಾರರು ಅಥವಾ ಲೆಂಕರು ಪ್ರಭುವಿಗಾಗಿ ಹೊಯ್ದಾಡಿದ ಒಂದು ಉಗ್ರ ರಣ ಇಲ್ಲಿ ಉದ್ದೇಶಿತವಿರಬಹುದು.

ಕಳಕುಳವಾಗೆ ಪಂಚಲನ ಬಲ್ವಡೆ ಪಂಚಲನಶ್ವ ಸಂಕುಲಂ
ಕಳಕುಳವಾಗೆ ಪಂಚಲನ ದಂತಿಘಟಾವಳಿ ಯುದ್ಧರಂಗದೊಳ್
ಕಳಕುಳವಾಗೆ ಗಾತ್ರ ಕರ ದಂ[ತ] ವಿಘಾತದೊಳುಗ್ರದಂತಿ ವ
ಕ್ಕಳ ಕ[ಜು]ವಾ[ಸು]ರಂ ಪರಿದುದುದ್ಭಟನಿಂ ಸುಭಟತ್ರಿಣೇತ್ರನಿಂ ॥ (೧-೪೪)

ಇಲ್ಲಿ ಬಂದಿರುವ ಪಂಚಲ 'ಪಾಂಚಾಲದೇವ' ಎಂಬುದರ ಸಂಕ್ಷಿಪ್ತನಾಮವಾಗಿದ್ದು, ಈತನು ಗಂಗ ಮಾರಸಿಂಹನ ಅಧೀನನಾದ ಒಬ್ಬ ಕಿರಿಯ ಅಧಿಕಾರಿಯಾಗಿರುವಂತೆ ಬಲುಮಟ್ಟಿಗೆ ಗೊತ್ತಾಗಿದೆ. ರಾಷ್ಟ್ರಕೂಟ ಮೇಲಾಳಿಕೆಯನ್ನು ಒಪ್ಪಿ ಮಾರಸಿಂಹನು ಗಂಗವಾಡಿ ಮತ್ತು ಇತರ ಪ್ರದೇಶಗಳನ್ನು ನೋಡಿಕೊಳ್ಳುತ್ತಿದ್ದಾಗ, ಸಬ್ಬಿ ೩೦ (ಧಾರವಾಡ ಜಿಲ್ಲೆ ಹುಬ್ಬಳ್ಳಿ ತಾಲೂಕಿನ ಛಬ್ಬಿ)ರಲ್ಲಿ ಪಂಚಲನು ಆಡಳಿತಾಧಿಕಾರಿಯಾಗಿ ಇರುತ್ತಿದ್ದನೆಂದು ಅದರಗಂಚಿ ಶಾಸನದಿಂದ (೯೭೧) ತಿಳಿಯುತ್ತದೆ; ಹಾಗೆಯೇ ರಾಷ್ಟ್ರಕೂಟರ ಕರ್ಕರಾಜನ ಕಾಲದಲ್ಲಿ ಮಾರಸಿಂಹನು 'ಎರಡಜುನೂಜಜಿ' ಪ್ರದೇಶವನ್ನು ನೋಡಿಕೊಳ್ಳುತ್ತಿದ್ದಾಗ ಈತನು 'ತೊಂಬತ್ತಾಜಿ'ರ ಪ್ರದೇಶವನ್ನು ನೋಡಿಕೊಳ್ಳುತ್ತಿದ್ದನೆಂದು ಗುಂಡೂರು ಶಾಸನದಿಂದ (೯೭೩) ತಿಳಿಯುತ್ತದೆ. ಹೀಗೆ ಈತ ರಾಷ್ಟ್ರಕೂಟರ ಆಡಳಿತಾವಧಿಯಲ್ಲಿ ಮಾರಸಿಂಹನ ಕೈಕೆಳಗಿನ ಒಬ್ಬ ಅಧಿಕಾರಿಯಾಗಿದ್ದನೆಂದು ಅಭಿಪ್ರಾಯವಾಗುವುದು (B. R. Gopa : The Chalukyas of Kalyana and the Kalachuris, 1981, p. 64). ಮಾರಸಿಂಹನ ಮೃತಿಯ ತರುವಾಯದಲ್ಲಿ ಗಂಗ ಅರಸೊತ್ತಿಗೆಯ ಸಂಬಂಧದಲ್ಲಿ ಗೊಂದಲವೇರ್ಪಟ್ಟಾಗ ಈ ಪಂಚಲನೂ ರಾಚಮಲ್ಲನ ಚಿಕ್ಕಪ್ಪ ಗೋವಿಂದನ ಹಾಗೆಯೇ ತಾನೂ ಗಂಗ ಸಿಂಹಾಸನವನ್ನು ಏರಲು ಪ್ರಯತ್ನಿಸಿರಬಹುದು. ಇದು ಕೈಗೂಡಿದಂತಾದ ಒಂದು ಘಟ್ಟದಲ್ಲಿ ಅವನು ತೈಲಪನನ್ನು ಎದುರಿಸಲು ಯತ್ನಿಸಿರಬಹುದು. ತೈಲಪನು ಪಂಚಲನನ್ನು ಎದುರಿಸಿದ ಪ್ರಸಂಗವನ್ನು ತಿಳಿಸುವ ಆಕರಗಳಲ್ಲಿ ಅಜಿತ ಪುರಾಣವೇ ಬಹುಶಃ ಮೊದಲಿನದು. ಇಲ್ಲಿ ದಲ್ಲಪನ ಮಗ ನಾಗದೇವನು ಪಂಚಲನ ಸೇನಾಸಮುಸ್ತವನ್ನು, ತಾನೇ ಪಡೆಯನ್ನು ನಡೆಸುತ್ತ, ತಾನು ಏರಿದ್ದ 'ಮಕ್ಕಳ ಕಜು' ಎಂಬ ಆನೆಯ ಸಹಾಯದಿಂದ ಅಸ್ತವ್ಯಸ್ತಗೊಳಿಸಿದನೆಂದು ರನ್ನ ಸೊಗಸಾಗಿ ನಿರೂಪಿಸಿದ್ದಾನೆ. ಈ ಯುದ್ಧದಲ್ಲಿ ತೈಲಪನಿಗೆ ಜಯವಾಯಿತೇ, ಇಲ್ಲವೇ ತಿಳಿಯದು. 'ಗದಾಯುದ್ಧ'ದಲ್ಲಿ ತೈಲಪನನ್ನು

'ಪಾಂಚಾಲಮದೇಭ ಪಂಚಾನನಂ' ಎಂದಿರುವುದರಿಂದ ಆತನು ಸು. ೧೦೦೫–೬ರ ಹೊತ್ತಿಗೆ ಈತನನ್ನು ನಿಗ್ರಹಿಸಿರಬೇಕೆಂದು ತಿಳಿಯಲವಕಾಶವಿದೆ. ಈಚಿನ ಕೆಲವು ಶಾಸನಗಳಲ್ಲಿ-ಮಾದಿನೂರು ಶಾಸನದಲ್ಲಿ (೧೧೩೬) ತೈಲಪನನ್ನು ಕುರಿತಾಗಿ 'ಪಾಂಚಾಲ ಮದಮರ್ದನ ಪಂಚಾನನ' ಎಂದಿದೆ. ಆರನೆಯ ವಿಕ್ರಮಾದಿತ್ಯನ ಗದುಗು ಶಾಸನದಲ್ಲಿ (೧೦೯೮) "ದೋರ್ಗರ್ವದಗುರ್ವಿಂ ಯುದ್ಧದೊಳ್ ಪಂಚಲನ ತಲೆಯುಮಂ ಕೊಂಡು" ಎಂದು ಸ್ಪಷ್ಟವಾಗಿಯೇ ಇದ್ದು, ಈ ಬಗೆಯ ಉಲ್ಲೇಖಗಳು ಇನ್ನೂ ದೊರೆಯುವಂತೆ ತೋರುತ್ತದೆ. ಶಿವಮೊಗ್ಗ ಜಿಲ್ಲೆಯ ಸಿರಿವೂರಿನಲ್ಲಿ ಬೀಡುಬಿಟ್ಟಿದ್ದಾಗ (ಸು. ೯೭೫) ಯುದ್ಧರಂಗದಲ್ಲಿಯೇ ಇವನ ಶಿರಚ್ಛೇದವಾಯಿತೆಂದು ಈಗ ತಿಳಿದಿದೆ.

ನಾಗದೇವನು ತನ್ನ ಸ್ವಾಮಿ ತೈಲಪನ ಅಪ್ಪಣೆಯಿಂದ ಕರಹಟದಿಂದ ಮಲ್ಲಮನೆಂಬವನನ್ನು ಅಟ್ಟಿದನೆಂದು ತಿಳಿಸುವ ಚರಿತ್ರಾಂಶ ಅಜಿಪು.ದಲ್ಲಿ–

ಬಲ್ಲಹನ ಬೆಸದೊಳೊಜಿಟರ
ಮಲ್ಲಂ ದಲ್ಲನ ತನೂಭವಂ ಕರಹಟದಿಂ
ಮಲ್ಲಮನಂ ಬೆನ್ನಟ್ಟಿದ
ಬಲ್ಲಾಳ್ತನದಿಂ ನಿಜೇಶನಂ ಮೆಚ್ಚಿಸಿದಂ ॥ (೧–೪೫)

ಎಂಬುದಾಗಿ ಬಂದಿದೆ. ಆಗ ಕರಹಡದಲ್ಲಿ ಆಳುತ್ತಿದ್ದವರು ಕೊಲ್ಲಾಪುರ ಶಾಖೆಯ ಶಿಲಾಹಾರರು. ಈ ಶಾಖೆಯಲ್ಲಿ ಮಲ್ಲಮನ ಹೆಸರು ಕಂಡುಬಂದಿಲ್ಲದಿರುವುದರಿಂದ ಈ ಯುದ್ಧ ಸಂದರ್ಭ ಸ್ಪಷ್ಟವಾಗುತ್ತಿಲ್ಲ. ಈತನ ಸ್ಥಾನಮಾನಗಳು ಇನ್ನೂ ನಿಗೂಢವಾಗಿಯೇ ಇವೆ (ವಿ. ವಿ. ಮಿರಾಶಿ ಸಂಪಾದಿತ CII. Vol. VI. Inscriptions of the Silaharan ಇಲ್ಲಿ ಸಹ ಪ್ರಸ್ತಾಪವಿಲ್ಲ.)

ನಾಗದೇವನು ಅಜಿತ ಪುರಾಣವನ್ನು ರನ್ನನಿಂದ ಬರೆಯಿಸಿ ಪ್ರೋತ್ಸಾಹಿಸಿದ ದಾನಚಿಂತಾಮಣಿ ಅತ್ತಿಮಬ್ಬೆಯ ಪತಿಯೆಂಬುದು ಮೊದಲು ಸ್ಪಷ್ಟವಾಗುವುದು ಆ ಕಾವ್ಯದಿಂದಲೇ. ಅನಂತರದಲ್ಲಿ ಈ ಬಗೆಯ ಉಲ್ಲೇಖವಾಗುವುದು ಅತ್ತಿಮಬ್ಬೆಯ ಶಾಸನವೆಂದು ಪ್ರಸಿದ್ಧವಾಗಿರುವ, ರನ್ನನೇ ಶಾಸನ ಲೇಖಕನಾಗಿರಬಹುದೆಂದು ಸಯುಕ್ತಿಕವಾಗಿ ಊಹಿಸಿರುವ ಲಕ್ಕುಂಡಿ ಶಾಸನದಲ್ಲಿ (೧೦೦೭). ಮಲ್ಲಪಯ್ಯನ ಪತ್ನಿ ಅಪ್ಪಕಬ್ಬೆ (ನಾಗಮಯ್ಯ–ನಾಗಿಯಬ್ಬೆ ದಂಪತಿಗಳ ಪುತ್ರಿ)ಯಲ್ಲಿ ಗುಂಡಮಯ್ಯ, ಏಳಮಯ್ಯ, ಪೊನ್ನಮಯ್ಯ, ಆದಮಯ್ಯ, ಪಲ್ಲ ಎಂಬ ಐವರು ಗಂಡುಮಕ್ಕಳೂ, ಅತ್ತಿಮಬ್ಬೆ, ಗುಂಡಮಬ್ಬೆ, ನಾಗಿಯಬ್ಬೆಯೆಂಬ ಮೂವರು ಹೆಣ್ಣುಮಕ್ಕಳೂ ಜನಿಸಿದ

ರೆಂದು ಮೊದಲು ನಿರೂಪಿಸಿ ಇವರಲ್ಲಿ ಅತ್ತಿಮಬ್ಬೆ ಗುಂಡಮಬ್ಬೆಯರನ್ನು ದಲ್ಲಪನ ಮಗ ನಾಗದೇವನಿಗೆ ಕೊಟ್ಟು ಮದುವೆಯಾಯಿತೆಂದು ರನ್ನ ವಿಶದಪಡಿಸಿದ್ದಾನೆ (೧-೩೮ ಗ). ಈ ನಾಗದೇವನು ಒಂದಕ್ಕಿಂತ ಹೆಚ್ಚಿನ ಯುದ್ಧಗಳಲ್ಲಿ ತೈಲಪನ ಪಕ್ಷದ ವೀರನಾಗಿ ಕಾದಿ ತನ್ನ ಪೂರ್ವವಯಸ್ಸಿನಲ್ಲಿಯೇ ತೀರಿಕೊಂಡನೆಂಬುದು, ಸಹಗಮನಕ್ಕೆ ತಾನು ಸಂಕಲ್ಪಿಸಿ ಗುಂಡಮಬ್ಬೆ ಓರಿಯಳಾದ ಅತ್ತಿಮಬ್ಬೆಗೆ "ನಿನಗೆ ಮಗಂ ಜಗತ್ತಿಲಕ ನಿರ್ವಪನಕ್ಕ ಮಗಂ ಸಮರ್ಥನ। ಪ್ಪಿನ ಮಿರು ನಾಗದೇವನೊಡನಾಂ ಬೆಸಕೇಳ್ವಪೆನ್" ಎಂಬುದಾಗಿ ಸೂಚಿಸಿದ ಒಂದು ಹೃದಯಂಗಮವಾದ ಮಾತಿನಿಂದ ನಿಗಮನಗೊಳ್ಳುತ್ತದೆ. ನಾಗದೇವ ವೀರಮರಣವನ್ನಪ್ಪಿದನೇ, ಇಲ್ಲವೇ ನಮಗೆ ನಿಶ್ಚಯವಾಗಿ ತಿಳಿಯದು; ಬಹುಶಃ ಅವನು ವೀರಮರಣವನ್ನು ಪಡೆದಿರಬೇಕು.

ರನ್ನ ಅಜಿತಪುರಾಣವನ್ನು ಬರೆಯುವ ಹೊತ್ತಿಗೆ (೯೯೩) ಅತ್ತಿಮಬ್ಬೆಯ ಮಗ ಅಣ್ಣಿಗದೇವ ದೊಡ್ಡವನಾಗಿದ್ದನು, ಆಹವಮಲ್ಲ ತೈಲಪನ ಪ್ರೀತಿಪಾತ್ರನಾಗಿ ಆತನ ಸೇನಾಪತಿಯಾಗಿ ಗಣ್ಯನಾಗಿದ್ದನು-ಎಂಬುದು ಗ್ರಂಥಾಂತ್ಯಭಾಗದಲ್ಲಿ ಬಂದಿರುವ ಆತನ ಅಗ್ಗಳಿಕೆಯನ್ನು ಕುರಿತ ಕಾವ್ಯಭಾಗದಿಂದ ತಿಳಿಯುವುದು. ಇದು ಬಹುಶಃ ನಾಗದೇವನ ಮರಣಾನಂತರದ ವಿದ್ಯಮಾನ. ಈ ಅಣ್ಣಿಗದೇವನು ಯಾಪನೀಯಸಂಘದ ಕಾಣೂರ್ಗಣದ ನೇಮಿಚಂದ್ರ ಮುನಿಗಳ ಶಿಷ್ಯ ಅಯ್ಯಣಯ್ಯನಿಗೆ ಶಿಷ್ಯನಾಗಿದ್ದವನು. ಆತನ ವೀರವೃತ್ತಾಂತಗಳು ಯಾವ ರೀತಿಯವು ಎಂಬುವನ್ನು ತಿಳಿಯುವ ಮಾಹಿತಿ ಅಜಿತ ಪುರಾಣದಲ್ಲಿ ದೊರೆಯುವುದಿಲ್ಲ.

ಅಣ್ಣಿಗದೇವನ ತಾಯಿ ಪುಣ್ಯವತಿ. ದಾನಚಿಂತಾಮಣಿ ಪ್ರಕಟಿಸಿದ ದಾನಾತಿಶಯ, ಜಿನಧರ್ಮನಿಷ್ಠೆ, ಕವಿ-ವಿದ್ವಜ್ಜನ ಪೋಷಣೆಯ ಔದಾರ್ಯ ಇವೆಲ್ಲ ಸಮೃದ್ಧವಾಗಿ, ಸರಸಸುಂದರವಾಗಿ ಅಜಿತ ಪುರಾಣದಲ್ಲಿ ನಿರೂಪಿತವಾಗಿದ್ದು, ಶ್ರೀನಂಶ್ರೀ ಮೊದಲಾದ ವಿದ್ವಾಂಸರು ಅವನ್ನು ಈಗಾಗಲೇ ವಿಸ್ತಾರವಾಗಿ ಪರಿಶೀಲಿಸಿದ್ದಾರೆ. ಅವರ ಆವೃತ್ತಿ ಇಲ್ಲಿಗೆ ಅನಗತ್ಯ. ಆಕೆಯ ದಾನಾತಿಶಯವನ್ನು ಉಗ್ಗಡಿಸುವಾಗ ಗಂಗರ ಬೂತುಗ (೯೩೬-೬೧), ಮರುಳ (೯೬೧-೬೩), ನೊಳಂಬಾಂತಕನೆನಿಸಿದ ಇಮ್ಮಡಿ ಮಾರಸಿಂಹ (೯೬೩-೭೪), ಗಂಗಮಂತ್ರಿ ಚಾವುಂಡರಾಯ (೯೭೮), ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಸಾಮಂತನಾಗಿದ್ದು ಕೊಪ್ಪಳದಲ್ಲಿ ಜಯಧೀರ ಜಿನಾಲಯವನ್ನು ನಿರ್ಮಿಸಿದ ಶಂಕರಗಂಡ ಇವರನ್ನೂ, ಕವಿ ತನ್ನ ಹುಟ್ಟೂರಿನ ಮುದುವೊಳಲನ್ನು ಕುರಿತಾಗಿ ಗಟ್ಟಗೆ (ಘಟಪ್ರಭ ನದಿ), ಪೆರ್ದೊರೆ (ಕೃಷ್ಣಾನದಿ), ತಪ್ಪವಾಡಿ, ತೊಜಿಗಲೆ, ಬೆಳುಗರೆ। ಬೆಳುಗರಿಯುಯುಳ್ಳಿಜು, ಜಂಬುಖಂಡಿ ಮಿಷ್ಟತು, ಮುದುವೊಳಲ್ ಈ ನೆಲಜಲ ಸನ್ನಿವೇಶಗಳನ್ನು ಕುರಿತಿರುವುದು ಗಮನಿಸತಕ್ಕುದಾಗಿದೆ. ಈಗಾಗಲೇ ಗಮನಿಸಿರುವಂತೆ "ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ..." ಎಂಬ ಪದ್ಯ ಹೇಳುವ

ಸಾಕ್ಷ್ಯದಿಂದ (೧–೬೦) ಶ್ರವಣಬೆಳ್ಗೊಳದ ಗೊಮ್ಮಟ ಜಿನನ ಶಿಲಾಮೂರ್ತಿಯ ಪ್ರತಿಷ್ಠೆ ಕ್ರಿ. ಶ. ೯೯೩ರ ಮೊದಲೇ ಆಯಿತೆಂಬ ಅಮೂಲ್ಯವಾದ ಸೂಚನೆಯೂ ಅಜಿತ ಪುರಾಣದಲ್ಲಿ ಕೃತಿ ಮಹತ್ತ್ವವನ್ನು ಹೆಚ್ಚಿಸಿದೆ: ಅಷ್ಟೇ ಅಲ್ಲ, ಶ್ರವಣಬೆಳ್ಗೊಳದ ಬಾಹುಬಲಿ ಆಗ್ಗೆ ಇನ್ನೂ 'ಕುಕ್ಕುಟೇಶ್ವರ'ನೆನಿಸಿದ್ದನಲ್ಲದೆ, ಈಗಿನ ರೂಢಿಯಂತೆ 'ಗೊಮ್ಮಟೇಶ್ವರ'ನೆನಿಸಿರಲಿಲ್ಲ ಎಂದೂ ತಿಳಿಯುವುದು.

# ನಾಲ್ಕು ನೂತನ ಛಂದೋರಚನೆಗಳು

ಪಿ. ಬಸವಣ್ಣ

## ೧. ಲಿಂಗಾಷ್ಟಕ
### (ಕನ್ನಡರೂಪ)

ಸಂಸ್ಕೃತ ಸ್ತೋತ್ರ ಸಾಹಿತ್ಯದಲ್ಲಿ ಭಕ್ತಿ ಗೇಯತೆಗಳಿಂದ ಪ್ರಸಿದ್ಧವಾದ "ಬ್ರಹ್ಮ ಮುರಾರಿ ಸುರಾರ್ಚಿತ ಲಿಂಗಂ" ಎಂಬ ವೃತ್ತಧಾಟಿಯ ಲಿಂಗಾಷ್ಟಕ ಎಲ್ಲರಿಗೂ ಪರಿಚಿತವಾದದ್ದೇ ಆಗಿದೆ. ಇದು ತ್ರಿಷ್ಟುಪ್ ಸಂಜ್ಞೆಯ ಛಂದೋ ವರ್ಗದ 2048 ವೃತ್ತಗಳಲ್ಲಿ 439ನೆಯದಾದ ದೋಧಕ ವೃತ್ತದಲ್ಲಿದೆ. ಆದರೆ ಈಗ ಪ್ರಚಲಿತವಿರುವ ಸಂಸ್ಕೃತದ ಲಿಂಗಾಷ್ಟಕ (4, 4, 4, 4) ನಾಲ್ಕು ಮಾತ್ರೆಯ ನಾಲ್ಕು ಗಣದ ಸಾಲುಗಳನ್ನು ಹೊಂದಿದೆಯೇ ಹೊರತು. ದೋಧಕ ವೃತ್ತದ ಛಂದಸ್ಸಿನಲ್ಲಿ (ಭ ಭ ಭ — —) ಇಲ್ಲ. ಆದ ಕಾರಣ ಇಲ್ಲಿ ಕನ್ನಡದಲ್ಲಿ ದೋಧಕ ವೃತ್ತದ ಛಂದಸ್ಸಿಗೆ ನಿಯುತಬದ್ಧವಾಗಿರುವಂತೆ ಲಿಂಗಾಷ್ಟಕವನ್ನು ರಚಿಸಲಾಗಿದೆ. ಕನ್ನಡದಲ್ಲಿ ಇದೊಂದು ಹೊಸ ಪ್ರಯತ್ನವಾಗಿದೆ. ಕನ್ನಡ ರೂಪದ ಲಿಂಗಾಷ್ಟಕವನ್ನು ಇಲ್ಲಿ ಕೊಡಲಾಗಿದೆ. ಈಗಾಗಲೇ ಹತ್ತಾರು ಜನ ಇದನ್ನು ಆಲಿಸಿ ಮೆಚ್ಚಿಕೊಂಡಿರುವುದು ಗಮನಾರ್ಹ ಸಂಗತಿಯಾಗಿದೆ.

1

ರೂಢಿಯ ಸೃಷ್ಟಿಗೆ ಕಾರಣ ಲಿಂಗಂ
ಕಾಡುವ ಪಾಪವ ದೂಡುವ ಲಿಂಗಂ
ಬೇಡಿದ ಭಾಗ್ಯವ ನೀಡುವ ಲಿಂಗಂ
ಬೇಡುವೆ ನಾಂ ಮನಸಾ ಶಿವಲಿಂಗಂ

2

ಧಾತ್ರಿಯ ಸಂತತ ರಕ್ಷಿಪ ಲಿಂಗಂ
ಪಾತ್ರವ ನೋಡದೆ ಪಾಲಿಪ ಲಿಂಗಂ
ನೇತ್ರಕೆ ಕಾಣದ ನಿರ್ಮಲ ಲಿಂಗಂ
ಸ್ತೋತ್ರಿಪೆ ನಾಂ ಮನಸಾ ಶಿವಲಿಂಗಂ

3

ನೀಗುತ ಕಷ್ಟವ ಕಾಯುವ ಲಿಂಗಂ
ಮಾಗಿದ ಭಾವಕೆ ತೋಚುವ ಲಿಂಗಂ
ಯೋಗಿಜನಾವಳಿ ಧ್ಯಾನಿಪ ಲಿಂಗಂ
ಬಾಗುವೆ ನಾಂ ಮನಸಾ ಶಿವಲಿಂಗಂ

4

ನಿರ್ಣಯ ಗೈಯಲಸಾಧ್ಯದ ಲಿಂಗಂ
ಕರ್ಣಕೆ ಸಿಲ್ಕದ ನಿಷ್ಕಲ ಲಿಂಗಂ
ಅರ್ಣವದಾಳವ ಮೀರಿದ ಲಿಂಗಂ
ವರ್ಣಿಪೆ ನಾಂ ಮನಸಾ ಶಿವ ಲಿಂಗಂ

5

ಸಾಜದಿ ಸರ್ವರು ಸೇವಿಪ ಲಿಂಗಂ
ಮೂಜಗವೆಲ್ಲವು ಪೂಜಿಪ ಲಿಂಗಂ
ತೇಜವ ಬೀರುತ ಶೋಭಿಪ ಲಿಂಗಂ
ಪೂಜಿಪೆ ನಾಂ ಮನಸಾ ಶಿವಲಿಂಗಂ

6

ಆರ್ತರ ಬಿನ್ನಪ ಮನ್ನಿಪ ಲಿಂಗಂ
ಧೂರ್ತರ ದರ್ಪವ ದಂಡಿಪ ಲಿಂಗಂ
ಅರ್ಥಕೆ ಸಿಲ್ಕದ ಅವ್ಯಯ ಲಿಂಗಂ
ಪ್ರಾರ್ಥಿಪೆ ನಾಂ ಮನಸಾ ಶಿವಲಿಂಗಂ

7

ಅಚ್ಚರಿದೋರುವ ಅದ್ಭುತ ಲಿಂಗಂ
ಸ್ವಚ್ಛತೆಯಿಂದಿರೆ ಮೆಚ್ಚುವ ಲಿಂಗಂ
ಬಿಚ್ಚುಮನಸ್ಸಿಗೆ ಕಾಣುವ ಲಿಂಗಂ
ಅರ್ಚಿಪೆ ನಾಂ ಮನಸಾ ಶಿವಲಿಂಗಂ

8

ಹಿಂದಣ ಪಾಪವ ನೀಗುವ ಲಿಂಗಂ
ಬಂಧನವೆಲ್ಲವ ಭೇದಿಪ ಲಿಂಗಂ
ಮುಂದಣ ಜನ್ಮವ ನೀಡದ ಲಿಂಗಂ
ವಂದಿಪೆ ನಾಂ ಮನಸಾ ಶಿವಲಿಂಗಂ

## ೨. ನಾದ ನಾಟ್ಯ ವೃತ್ತ

ಇದು ಪ್ರಕೃತಿ ಸಂಜ್ಞೆಯ ಛಂದೋವರ್ಗದ 2097152 ವೃತ್ತಗಳಲ್ಲಿ 693547ನೆಯ ವೃತ್ತ. ಈ ವೃತ್ತದಲ್ಲಿ ರಚಿಸಿರುವ ಹಾರಬಂಧವನ್ನು ಸಚಿತ್ರವಾಗಿ ನಿರೂಪಿಸಿದೆ. ಇದರ ಲಕ್ಷಣ–

**ನಾದ ನಾಟ್ಯ ವೃತ್ತ ತಾಂ ರಂಜಿತಂ ರಯೆಂಭರಂ ತೋರಲಾಗ ಶೋಭಿಕುಂ**

ವೃತ್ತಪದ್ಯ :

ವಾದ ಭೇದದಿಂದಲೇ ನಿತ್ಯಸತ್ಯಹತ್ಯಗೈದಂಥ ವ್ಯರ್ಥಪಾಂಥ ನಾಂ
ಭೇವದಿಂದ ತಾಳ್ದ ದುಭ್ರಾಂತಿನೇತಿಭೀತಿಯುಂ ಕಂದಿಕುಂದಿನೊಂದಿಹೆಂ
ವೋದದಿಂದ ಪಾದಕುಂ ಗೌರಸಾರಹಾರಮಂ ದಿಂಡುಗೊಂಡು ಸೂಡುವೆಂ
ಖೇದದಿಂದ ಮಿಂದ ಮೋಲ್ಮುದ್ದಸಿದ್ಧಿಬುದ್ಧನೆಂದೀಶ ಪಾಶನಾಶಗೈ




ಸಂಖ್ಯಾನುಸಾರ ಓದಿದರೆ ಹಾರಬಂಧದ ವಾಚನ ರೀತಿ ತಿಳಿಯುತ್ತದೆ. ಇದನ್ನೇ ಹಾರರೂಪದಲ್ಲಿ ಕೆಳಗೆ ಕೊಡಲಾಗಿದೆ.

ಚಿತ್ರಕಾವ್ಯ ಈಗಿನ ಕಾವ್ಯದಲ್ಲಿ ಕಣ್ಮರೆಯಾಗುತ್ತಿರುವ ಕಲೆಗಳಲ್ಲಿ ಒಂದಾಗಿದೆ. ಈ ಹಿನ್ನೆಲೆಯಲ್ಲಿ ಈ ನವೀನ ರಚನೆಗೆ ಮಹತ್ವವಿದೆ. ಚಿತ್ರಕಾವ್ಯ 'ಗ್ರಂಥವನ್ನು ತಂದು ಶ್ರೀ ಟಿ. ವೆಂಕಟಾಚಲ ಶಾಸ್ತ್ರಿಯವರು ಕನ್ನಡಕ್ಕೆ ಅದ್ಭುತ ಕೊಡುಗೆ ಇತ್ತಿರುವು ದನ್ನು ಇಲ್ಲಿ ಸ್ಮರಿಸಬೇಕಾಗಿದೆ.

## ೩. ಪನ್ನಗವೇಣ್ಯಷ್ಟಕಂ

ಇದು ಅತಿಧೃತಿ ಸಂಜ್ಞೆಯ ಛಂದೋವರ್ಗದ 5,24288 ವೃತ್ತಗಳಲ್ಲಿ 3,73811ನೆಯದು

ಇದರ ಲಕ್ಷಣ ಹೀಗಿದೆ :

ರಂಭಮಂ ರಂ ಸಸಲಂಗಳ್ ಬಿನ್ನಣದಿಂ ಬರೆ ಪನ್ನಗವೇಣಿ

ಇದೊಂದು ಹೊಸವೃತ್ತ. ಪನ್ನಗವೇಣಿ ಎಂಬ ಹೆಣ್ಣುಮಗಳ ಮದುವೆ ಸಂದರ್ಭದಲ್ಲಿ ಆಕೆಗೆ ಶುಭಹಾರೈಕೆ ಆಶೀರ್ವಾದವನ್ನು ನೀಡುವಾಗ ಕಣ್ವರು–ಶಕುಂತಲೆಗೆ ಬುದ್ಧಿವಾದ ಹೇಳಿದ ರೀತಿಯಲ್ಲಿ ಕಾಳಿದಾಸನ ಶಾಕುಂತಲದ ನಾಲ್ಕನೇ ಅಂಕದ ಸ್ಫೂರ್ತಿಯಲ್ಲಿ ಈ ಅಷ್ಟಕವನ್ನು ರಚಿಸಲಾಗಿದೆ. ಸಾಂಪ್ರದಾಯಿಕ ಭಾವನೆಗಳೊಂದಿಗೆ ವಿನೂತನ ಹಾರೈಕೆಗಳು ಇಲ್ಲಿ ಮೇಳವಿಸಿರುವುದೊಂದು ವಿಶೇಷ. ಕೇವಲ ಪುತ್ರವತೀಭವ ಎನ್ನದೆ, ಸುಪುತ್ರಿಯೋರ್ವಳ್ಗಿಸಿರನ್ನಿತ್ತು............ಎಂಬ ಮಾತು. ಜಾತಿ ಪಂಥಗಳ ವೈಷಮ್ಯಂ ಬಿಟ್ಟು ಸರ್ವರುಮೊಂದೆನಿಸು............ಸುಭೃತ್ಯರಂ ಮಕ್ಕಳಪೋಲ್ಕಂಡು

ಬಾಳದೂಡು............ಇಂಥ ಆಶೀರ್ವಾದಗಳು ಕಾಲೋಚಿತವೂ ಸರ್ವಮಾನ್ಯವೂ ಆಗಿದ್ದು ಈ ಅಷ್ಟಕದ ಹಿರಿಮೆಯನ್ನೆತ್ತಿ ಹಿಡಿದಿವೆ. ಈ ಅಷ್ಟಕವನ್ನು ವಿವಿಧ ರಾಗಗಳಲ್ಲಿ ಹಾಡಿದರೆ ಚೆನ್ನಿರುತ್ತದೆ. ತಿಳಿದವರು ಸೂಕ್ತ ರಾಗಗಳನ್ನು ಅಳವಡಿಸಿಕೊಳ್ಳಬಹುದು ನನಗೆ ಸೂಕ್ತವೆನಿಸಿದ ರಾಗಗಳನ್ನು ಇಲ್ಲಿ ಸೂಚಿಸಿದ್ದೇನೆ.

### ಪನ್ನಗವೇಣ್ಯಷ್ಟಕಂ

**ಭೂಪಾಳಿ** ಭಾಸ್ಕರಂ ಪುಟ್ಟುವ ಮುನ್ನಂ ಮೇಲೆಳ್ದು ಸದ್ಗುರುವಂ ನೆನೆದುಂ ನಿ
ಜೇಷ್ಟಲಿಂಗಾರ್ಚನೆಯುಂ ಗೈದುಂ ಭಕ್ತಿಯಿಂ ವರಜಂಗಮಮ್ಮೈದೆ
ನಿಷ್ಠೆಯಿಂ ಸೇವಿಸಿ ನಿನ್ನೆಲ್ಲೈಶ್ವರ್ಯಮಂ ಮನಸಾ ಮಿಗೆ ನೀಡಿ
ವಿಶ್ವಸನ್ಮಾನ್ಯತೆಯಾಂತುಂ ದೀರ್ಘಾಯುವಾಗೆಲೆ ಪನ್ನಗವೇಣಿ ॥೧॥

**ಸಂಕ್ರಂದನಪ್ರಿಯ** ಅತ್ತೆಮಾವಂದಿರ ಮಾತನ್ನೆಂದುಂ ತಿರಸ್ಕೃತಗೈಯದಲೋತು
ಭಕ್ತಿಯಿಂ ಸೇವಿಸು ಕಾಮಕ್ರೋಧಾದಿ ವೈರಿಗಳಂ ಗೆಲಿ ಸುತ್ತ
ಮುತ್ತಲಿಪ್ಪೈದೆಯರೇನಾನುಂ ಮಂದಿರಕ್ಕೊಲಿದೈತರಲಿತ್ತು
ಉತ್ತಮ ದ್ರವ್ಯಗಳಂ ಮೇಣ್ತಾಂಬೂಲ ನೀಡೆಲೆ
ಪನ್ನಗವೇಣಿ ॥೨॥

**ಕಾನಡ** ತಂದೆತಾಯ್ಮಂಡೆಗೆ ಹೋತಾರೌ ಹುಲ್ಲ ತಾರದಿರೌ ಮನದನ್ನ
ತಂದುದಂ ಗೌರವದಿಂದುಂಡುಟ್ಟೋದಿ ತೃಪ್ತಿಗೊಳೌ ಕನಸಲ್ಲು
ಕುಂದಬೇಡೌ ಪತಿಗೆಂದುಂ ನವ್ಯೋತ್ತರಂಗಃಡೆಲೌ ಹಿತಸಖ್ಯ
ದಿಂದವಂಗೋತು ಸುಖಂಗೊಟ್ಟಾನಂದಿಸೌವಿಲಿ ಪನ್ನಗವೇಣಿ ||೩||

**ಬೇಗಡೆ** ಓತು ನೀಂ ಸಂತತಮುಂ ನಾನಾರೀತಿಯಿಂ ಪತಿಯಂ ಸಲೆ ಸೇವಿ
ಸಾತನಂ ದೈವಮೆನುತ್ತಂ ಕೊಂಡಾಡುತಂ ನಿಜ ಧೈರ್ಯದಿ ಸತ್ಯ
ನೀತಿಯುಂ ಪಾಲಿಸುತಂ ಪತ್ನೀಧರ್ಮದೊಳ್ನವ ಜಾನಕಿಯೆಂಬ
ಖ್ಯಾತಿತಾಳ್ದುಂ ಶತವರ್ಷಂ ಬಾಳ್ದು ಸೊಗಂಬಡೆ ಪನ್ನಗವೇಣಿ ||೪||

**ಮೋಹನ** ಮುತ್ತುಮಾಣಿಕ್ಯಗಳಂಶಿರ್ಪ ಪುತ್ರಯುಗ್ಮವ ನೀಂ ಪಡೆದುಂ ಸು
ಪುತ್ರಿಯೋರ್ವಳ್ಗು ಸಿರನ್ನಿತ್ತುಂ ಸುತ್ತಮುತ್ತಣ ಬಂಧುಗಳಿಂ ಮ
ಹೋತ್ತಮಳ್ಬಾತ್ರಿಯೋಳೀ ನಾರೀರತ್ನಮೆಂಬ ಪೆಸರ್ವಡೆದುಂ ಸು
ಭೃತ್ಯರಂ ಮಕ್ಕಳವೋಲ್ಕಂಡುಂ ಬಾಳಮೂಡೆಲಿ ಪನ್ನಗವೇಣಿ ||೫||

**ಹಿಂದೂಸ್ಥಾನೀಕಾಪಿ** ಮಾರನೀತಂ ನಿಜದಿಂ ನೋಡಲ್ನೀಲಕಂಠನಿಳಾತಲದೊಳ್ಕ
ಬೇರಸಂದೇ ಮನದೊಳ್ತಂದೀತಂಗೆ ಧಾರಿಣಿ
ಯೊಳ್ಸಮರಿಲ್ಲ
ಮಾರುತಾಸಂತಿವನಂ ಮೀರಲ್ಸಾಧ್ಯಮೆಂದಿವನಂ
ಜೊತೆಗೂಡಿ
ನೂರುವರ್ಷಂಬರಮುಂ ನೀಂ ಮುತ್ತೈದೆಯಾಗಿರು
ಪನ್ನಗವೇಣಿ ||೬||

**ಕೇದಾರಗೌಳ** ಜಾತಿಪಂಥಂಗಳ ವೈಷಮ್ಯಂ ಬಿಟ್ಟು ಸರ್ವರುಮೊಂದೆನಿಸಾವ
ರೀತಿಯುಂ ಭಿನ್ನತೆಯಂ ಬಾಹ್ಯಾಂತರ್ಯದೊಳ್ತರದುತ್ತಮ ರೀತಿ
ನೀತಿನೇಮಂಗಳ ಕಾಯುತ್ತಲ್ಸೂಕ್ಷ್ಮಬುದ್ಧಿಯನೊಟ್ಟಿಗೆ ಪಾರ
ಮಾರ್ಥ ಮೋಕ್ಷಾಲೌಕಿಕಕೊಯ್ಯುತ್ತಂ ಜಾಣಳಾಗೆಲೆ ಪನ್ನಗವೇಣಿ
||೭||

**ಹಿಂದೋಳ** ನೋಪ್ಪುನಷ್ಟಂ ಬರಲಾತಂಕಂಗೊಳ್ಳದಿರ್ಪಾತಿ ಕೋಪಿಸಲೋತು
ಸೇವೆಗೈ ಕ್ಷೋಣಿಯೊಳಿಲ್ಲಸ್ಥೈರ್ಯವೆಂಬವೋಲ್ನಡೆ ಸ್ಥೈರಣೆಯಿಂ ಸ್ವ
ಭಾವವೈರಾಗ್ಯದೊಳಾನಂದಂಗಾಣ್ಬುದಾ ಪರಮಂ ನೆನೆ ಸ್ವಾನು
ಭಾವದೊಳ್ನೈಮರೆಯುತ್ತಂ ಸನ್ಮುಕ್ತಿಯೊಂದೆಲೆ ಪನ್ನಗವೇಣಿ ||೮||

ವಿ.ಸೂ. : ನಾನು ಸೂಚಿಸಿರುವ ರಾಗಗಳಲ್ಲಿ ಹಾಡಿದರೆ ಚೆನ್ನು ಅನಿಸುತ್ತದೆ.

## ೪. ಏಕ ದಂತ ಪಂಚಕಂ

ಈ ವೃತ್ತವು ವಿಕೃತಿ ಸಂಜ್ಞೆಯ ಛಂದೋವರ್ಗದ 8388608 ವೃತ್ತಗಳಲ್ಲಿ ಇದು 3511740ನೆಯದಾಗಿದೆ.

ಇದರ ಲಕ್ಷಣ :

ಸನಭಂ ರಯುಸಜಂ ಲಗಮುಂ ಬರಲ್ ಕರಂ ರಂಜಿಪ್ಪುದೇಕದಂತಮಲಾ।

ಇದರ ಲಕ್ಷ್ಯ ಪಂಚಕದಲ್ಲಿ "ಕಟ್ಟುಗೆ ಕಟ್ಟುದಿಕೇ ಕಪಿಸಂತತಿ........ಮಾದರಿಯಲ್ಲಿ ಕವೀಂದ್ರರ್ಗರಿದಾವುದೈ ಜಗದೊಳ್ ? ಎಂಬಂತೆ ನಾನಾ ನಿದರ್ಶನಗಳನ್ನು ನೀಡುವುದರ ಮೂಲಕ ಕವಿಗಳ ಹಿರಿಮೆಯನ್ನು ಕೊಂಡಾಡಲಾಗಿದೆ. ವಿಪುಲ ಪೌರಾಣಿಕ ನಿದರ್ಶನಗಳು ಇಲ್ಲಿ ಒಗ್ಗೂಡಿರುವುದು ವಿಶೇಷ ಸಂಗತಿಯಾಗಿದೆ.

### ಕವೀಂದ್ರರ್ಗರಿ ದಾವುದೈ ಜಗದೊಳ್

ಸನಭಂ ರಯುಸಜಂ ಲಗಮುಂ ಬರಲ್ ಕರಂ ರಂಜಿಪ್ಪುದೇಕದಂತಮಲಾ!
ಗುರುಮಂ ಕೊಲಿಸುವರ್ಶಿಲೆಯುಂ ಬದುಂಕಿಪರ್ಸಾಗರಮೀಂಟುವರ್ದಿವಿಯೊ
ಳ್ಮುರಗಳ್ಕಿರುಗುಮಂತುರೆ ನಿರ್ಮಿಪರ್ಮಹಾಪರ್ವತಮಂ ಶರಾಸನಗೈ
ವರಿಳಾತಳಕೆ ಪೋಪರಪೋ ಮಹಾದ್ರಿಯನ್ನಂಗುಲಿಯಿಂ ಸ್ಥಳಾಂತರಿಪ
ರ್ಪರನಿಂ ನರಗೆ ಕುಂಟಣಿ ಗೈಸುವರ್ಕವೀಂದ್ರರ್ಗರಿದಾವುದೈ ಜಗದೊಳ್
॥ ೧ ॥

ರವಿಯುಂ ಚಲಿಸದೊಲ್ಮಡೆವರ್ಸುರೇಂದ್ರನಂ ಕುಕ್ಕುಟಮಾಗಿಪರ್ಜವದಿಂ
ದಿವಿಯೊಳ್ಮನಿ ತ್ರಿವಿಷ್ಟಪ ಕಟ್ಟುವರ್ತ್ರಿನೇತ್ರಂ ತಿರಿದುಂಬವೋಲಿಸಪ
ರ್ಭುವನಾಧಿಪತಿಯಿಂ ನಿಜಜಾಯೆಯು। ಕ್ರಯಿಪ್ಪರ್ವಿಧಿವಕ್ತ್ರಮಂ ತೆಗೆವ
ರ್ಶಿವ ಮೆಚ್ಚುವ ತೆರಂ ಶರ ಹೂಡುವರ್ಕವೀಂದ್ರರ್ಗರಿದಾವುದೈ ಜಗದೊಳ್
॥ ೨ ॥

ವಿಧಿಗಂ ನಿಜತನೂಭವೆಗಂ ವಿವಾಹಗೈವರ್ಶಿಶುವಿಂ ನಿಶಾಚರರಂ
ವಧೆಗೈಸುವರಿಳಾಸತಿಯುಂ ರಸಾತಳಕ್ಕೊಯ್ಯು ರಹಸ್ಯದಿಂದಿಡುವ
ರ್ವಿಧುವಂ ವಿಟನೆನಿಪ್ಪರಿಳಾ ಸುಪುತ್ರಿಯುಂ ಬೆಂಕಿಯೊಳಾಯ್ಸುವರ್ಕ್ಷಣದೊ
ಳ್ನಿಧಿಯಿಂಟಿದವನಂ ಸಹ ಕೊಲ್ಲುವರ್ಕವೀಂದ್ರರ್ಗರಿದಾವುದೈ ಜಗದೊಳ್
॥ ೩ ॥

ಜಲಜೋದ್ಭವ ಜನಾರ್ದನ ಜಾಹ್ನವೀಪರನ್ನುಂ ಶಿಶುವಾಗಿಪರ್ಜಣದೊ
ಳ್ಳಿಲನಂ ಬಗೆದು ನೀರ್ತರುವರ್ಶಿಖಂಡಿಯಿಂ ವೀರನನುಂ ವಿನಾಶಿಸುವ
ತ್ರಿಳಿಯಲ್ತೃಣವನುಂ ಘನಮಾಗಿಪರ್ಗಮಾಕಾಂತ ದಶಾವತಾರಗಳಂ
ತಳೆವಂತೆಸಗುವರ್ಮಾಳೆ ಪೊಯ್ಯುಲ್ವರ್ಕವೀಂದ್ರರ್ಗರಿದಾವುದೈ ಜಗದೊಳ್
॥ ೪ ॥

ಮನದೊಳ್ಮಿಸುನಿಜಿಂಕೆಯು ಸೃಷ್ಟಿಪರ್ಶಚೀಕಾಂತನ ಭ್ರಷ್ಟನಾಗಿಸುವ
ಮರ್ಮನಿತಲ್ಲಜರಿಗಂ ಕಡುಮೋಹಿಪಟ್ಟವೀವರ್ಕಡಲಂ ಕ್ಷಣಾರ್ಧದಿ ಲಂ
ಘನಗೈಸಿ ಕಪಿಯಿಂ ಕಲೆತೋರುವರ್ಮಹಾಮೇರುವನೇರಿ ಮಾಸಿಸುವ
ಗ್ರನಿತಂ ಕೃತಿಗಿಳಿಪ್ಪವರ್ಗೆ ಬಾಳನು ಮಾತ್ರಂ ಸರಿದೂಗಿಸಲ್ಕರಿದೈ ॥ ೫ ॥

# ಸಾಮವಿಧಾನ ಬ್ರಾಹ್ಮಣದಲ್ಲಿ ಜ್ಞಾನಕಾಂಡದ ಅಧ್ಯಯನ

ವಿ. ಆರ್. ಶ್ರೀನಿವಾಸ್

ತ್ರಯೀ ವಿದ್ಯೆಗಳಲ್ಲಿ ಮೂರನೆಯದಾದ 'ಸಾಮವೇದ'ವು ಸಹಸ್ರ ಶಾಖೆಗಳನ್ನು ಹೊಂದಿದೆಯೆಂದು ಹೇಳಲ್ಪಟ್ಟಿದೆ. ಆದರೆ ಈಗ ಪ್ರಚಲಿತದಲ್ಲಿರುವುವು ಮೂರು ಶಾಖೆಗಳಷ್ಟೆ. ಅವುಗಳು-ಕೌಥುಮ, ಜೈಮಿನೀಯ, ರಾಣಾಯನೀಯ. ದಕ್ಷಿಣ ಭಾರತದಲ್ಲಿ ಹೆಚ್ಚು ಪ್ರಚಲಿತವಾಗಿರುವುದು 'ಕೌಥುಮ' ಶಾಖೆ. ಈ ಶಾಖೆಯಲ್ಲಿ ಎಂಟು ಬ್ರಾಹ್ಮಣಗಳಿವೆ. ಅವುಗಳು—ಪಂಚವಿಂಶ (ತಾಂಡ್ಯ, ಪ್ರೌಢ), ಷಡ್ವಿಂಶ, ಸಾಮ ವಿಧಾನ, ಆರ್ಷೇಯ, ದೇವತಾಧ್ಯಾಯ, ಛಾಂದೋಗ್ಯ, ಸಂಹಿತೋಪನಿಷತ್, ವಂಶ. ಈ ಎಂಟು ಬ್ರಾಹ್ಮಣಗಳಲ್ಲಿ ತಿಳಿಯಪಡಿಸಿರುವ ವಿಷಯಗಳು ಈ ರೀತಿ ಇವೆ.

ಪಂಚವಿಂಶ : ಯಾಗ ಅನುಷ್ಠಾನ, ಉದ್ಗಾತೃ ಗಣದವರ ಯಾಗ ಕಾರ್ಯ ನಿರ್ವಹಣೆ ಇತ್ಯಾದಿ.

ಷಡ್ವಿಂಶ : ಪಂಚವಿಂಶ ಬ್ರಾಹ್ಮಣದಲ್ಲಿ ವಿವರಿಸಲಾಗಿರದ ಉದ್ಗಾತೃ ಗಣದವರ ಯಾಗ ಕಾರ್ಯ ವಿವರಣೆ ಇತ್ಯಾದಿ.

ಸಾಮ ವಿಧಾನ : ಕೇವಲ ಸಾಮಗಾನದಿಂದ ಮಾತ್ರವೇ ಯಾಗ ಫಲಪ್ರಾಪ್ತಿ, ಪ್ರಾಯಶ್ಚಿತ್ತ, ವಶೀಕರಣ, ಕಾರ್ಯಾರ್ಥ ಸಿದ್ಧಿ, ಪ್ರಯೋಗಗಳು ಇತ್ಯಾದಿ.

ಆರ್ಷೇಯ : ಸಾಮಗಳ ಋಷಿ ಸಂಬಂಧ ವಿಚಾರ.

ದೇವತಾಧ್ಯಾಯ : ಸಾಮಗಳ ದೇವತಾ ಸಂಬಂಧ ವಿಚಾರ.

ಛಾಂದೋಗ್ಯ : ಗೃಹ್ಯಕಾರ್ಯಗಳ ಯಜುರ್ಮಂತ್ರಗಳ ವಿಚಾರ ಮತ್ತು ಉಪನಿಷತ್ತು (ಜ್ಞಾನಕಾಂಡ).

ಸಂಹಿತೋಪನಿಷತ್ : ಸಾಮ ಸಂಹಿತೆಯ ಗಾನಸ್ವರೂಪ, ಗಾನ ವಿಧಾನಗಳು.

ವಂಶ : ಋಷಿಗಳ ವಂಶದ ಅನುಕ್ರಮಣಿಕೆ.

ಈ ಎಂಟು ಬ್ರಾಹ್ಮಣಗಳಲ್ಲಿ 'ಸಾಮ ವಿಧಾನ' ಬ್ರಾಹ್ಮಣವು ಮಾತ್ರ ಬ್ರಾಹ್ಮಣಗಳ ಗುಂಪಿಗೆ ಸೇರದೆ, ಅದು ಕೇವಲ ಮಂತ್ರ ವಿದ್ಯೆ. ಪ್ರಾಯಶ್ಚಿತ್ತ, ಕಾಮ್ಯಸಿದ್ಧಿ ಪ್ರಯೋಗಗಳು, ವಶೀಕರಣ. ಇತ್ಯಾದಿಗಳನ್ನು ಮಾತ್ರ ವಿವರಿಸಿ, ಇತರ ಏಳು ಬ್ರಾಹ್ಮಣಗಳಿಗಿಂತ ಭಿನ್ನವಾಗಿದೆಯಾದ್ದರಿಂದ, ಇದನ್ನು 'ಬ್ರಾಹ್ಮಣ'ವೆಂದು ಪರಿಗಣಿಸಲಾಗದೆಂದು ವಿಚಾರವಿದೆ. ಈ ಬ್ರಾಹ್ಮಣವು ಕೇವಲ ಕರ್ಮಕಾಂಡದಂತಿದ್ದು, ಜ್ಞಾನಕಾಂಡವು ಲವಲೇಶವೂ ಇಲ್ಲವೆಂದು ಒಂದು ಅಭಿಪ್ರಾಯವಾಗಿದೆ.

ಆದರೆ, ಈ ಲೇಖನದಲ್ಲಿ ಈ ಅಭಿಪ್ರಾಯವು ತಪ್ಪೆಂದೂ, ಸಾಮವಿಧಾನ ಬ್ರಾಹ್ಮಣದಲ್ಲಿ ಜ್ಞಾನಕಾಂಡವು ವಿಚಾರಮಾಡಲ್ಪಟ್ಟಿರುವುದೆಂದೂ ಈ ರೀತಿ ವಿವರಿಸಲಾಗುವುದು.

ಮೊದಲನೆಯದಾಗಿ, ಯಾವುದೇ ಒಂದು ಯಾಗದ, ದೇವತಾರ್ಚನೆಯ ಪರಮ ಧ್ಯೇಯ ಎಂದರೆ ತ್ಯಾಗ, ಪರಸಹಿಷ್ಣುತೆ, ಪರೋಪಕಾರ ಹಾಗೂ ಸಮಾಜದ ಸದಸ್ಯರೆಲ್ಲರಿಗೂ ಸಮವಾದ ಸುಖ ಸಂತೋಷವು.

ಯಾವುದೇ ಯಾಗವನ್ನು ಒಬ್ಬ ಮನುಷ್ಯನೇ ಮಾಡಲಾಗಲಾರದು. ಸಮಾಜದ ಎಲ್ಲಾ ವರ್ಗದವರ ಸಹಕಾರದಿಂದಲೇ ಯಾಗವು ನೆರವೇರಿಸಲ್ಪಡುವುದು. ಸಾಂಕೇತಿಕವಾಗಿ ಯಾವುದೇ ಯಾಗದಲ್ಲಿ ಮೂರು ವೇದಗಳ ಪಠನವಿರುವುದನ್ನು ನಾವು ಗಮನಿಸಬಹುದು. ಇಲ್ಲಿ ಯಾರದೇ ಶ್ರೇಷ್ಠತೆಯ ಪ್ರಶ್ನೆಯೇ ಇಲ್ಲ. ಎಲ್ಲರ ಸಹಕಾರವಷ್ಟೇ ಅವಶ್ಯಕವಾಗಿರುವುದು. ಹಾಗೆಯೇ ಯಾಗದಲ್ಲಿ ಅಗ್ನಿಗೆ ಅರ್ಪಿಸುವ ಪರಿಕರಗಳು, ಮೋಹವನ್ನು ತ್ಯಾಗ ಮಾಡುವ ಸಂಕೇತವೇ ಹೊರತು ವಿನಾಶವಲ್ಲ. ಹಾಗೆಯೇ ಯಾಗದಲ್ಲಿ ದಾನ, ದಕ್ಷಿಣೆ ನೀಡುವುದು ಸಮಾಜದ ಸಂಪತ್ತನ್ನು ಸದಸ್ಯರೆಲ್ಲರೂ ಸಮನಾಗಿ (ಅವರ ಗುಣಕ್ಕೆ ಅನುಗುಣವಾಗಿ) ಹಂಚಿಕೊಳ್ಳುವ ಸಂಕೇತವೇ ಹೊರತು, ಅಹಂಕಾರದ ಪ್ರದರ್ಶನವಲ್ಲ. ಯಾಗದಲ್ಲಿ ಭಾಗವಹಿಸುವ ಎಲ್ಲ ಜನರೂ ಯಾಗದ ಆರಂಭದಿಂದ ಅಂತ್ಯದ ವರೆಗೂ ಬೇರೆ ಯಾವ ಕಾರ್ಯಗಳಲ್ಲಿಯೂ ನಿರತರಾಗುವುದಿಲ್ಲ. ಇದರಿಂದ ಸಮಾಜದ ಸದಸ್ಯರು ಬೇರಾವ ಕೆಟ್ಟ ಕಾರ್ಯಗಳನ್ನು ಯೋಚಿಸಲೂ ಸಹ ಅಶಕ್ತರಾಗುತ್ತಾರೆ. ಇದರಿಂದ ಸಮಾಜಘಾತುಕ ವ್ಯಕ್ತಿಗಳು ಸಹ ಕಂಟಕಪ್ರಾಯ ಕಾರ್ಯದಿಂದ ವಿಮುಖರಾಗಿದ್ದರೆ, ಅದೇ ಸಮಾಜಕ್ಕೆ ಲಾಭಕರ. ಇದರಿಂದ ಪ್ರತಿಯೊಬ್ಬನೂ ಸಂತೋಷ ಪಡೆಯುತ್ತಾನೆ.

ಆದ್ದರಿಂದ, ಯಾಗದಲ್ಲಿ ನಿರತರಾಗಿರುವ, ನಿರತರಾದ ಜನರು ತಮ್ಮ ಕಾರ್ಯತತ್ಪರತೆಯಿಂದ ಮಾನ್ಯರಾಗಿ ಗಣ್ಯ ವ್ಯಕ್ತಿತ್ವವನ್ನು ಪಡೆಯುತ್ತಾರೆ. ಅವರುಗಳು ಸಮಾಜಕ್ಕೆ ಮಾರ್ಗದರ್ಶಿಗಳಾಗುತ್ತಾರೆ.

ಬಹುಶಃ ಮನುಷ್ಯನ ನಿರಂತರ ಬದಲಾವಣೆಯಿಂದ, ಯಾಗ ಕಾರ್ಯಗಳಲ್ಲಿ ನಿರತರಾಗುವವರ ಸಂಖ್ಯೆ ಕ್ಷೀಣಿಸಿ, ಕ್ರಮೇಣ ಯಾಗ ಕಾರ್ಯನಿರ್ವಹಣೆ ಕ್ಷಯವಾಗಿರಬಹುದು. ಇದರಿಂದಾಗಿ, ಸಮಾಜದ ಅನೇಕ ಜನರು ಕಾರ್ಯವಿಲ್ಲದೆ, ದುಷ್ಕಾರ್ಯಗಳಲ್ಲಿ ತೊಡಗಿ, ಸಮಾಜಕ್ಕೆ ಕಂಟಕಪ್ರಾಯರಾಗಿರಲೂ ಸಾಕು. ಹೀಗಾದಾಗ, ಇಂತಹ ಜನರನ್ನು ಸರಳ ರೀತಿಯಲ್ಲಿ ದುಷ್ಕಾರ್ಯ ವಿಮುಖರನ್ನಾಗಿ ಮಾಡಲು ಈ ರೀತಿಯ ಆಕರ್ಷಣೀಯವಾದ 'ಸಾಮ ವಿಧಾನ' ಬ್ರಾಹ್ಮಣವನ್ನು ಜ್ಞಾನಿಗಳು ರೂಪಿಸಿ, ಅದರ ಕಾರ್ಯತತ್ಪರತೆಯಿಂದ ಸಮಾಜ ಘಾತಕ ವ್ಯಕ್ತಿಗಳನ್ನು ಶೀಲವಂತರನ್ನಾಗಿ ಮಾಡಲು ಹವಣಿಸಿರಬಹುದೆಂದು ಅಭಿಪ್ರಾಯ.

'ಸೋಮಾರಿಯ ಮನಸ್ಸು ದುಷ್ಕಾರ್ಯಗಳ ಆಗರ' ಎಂದಿರುವ ಗಾದೆಯಂತೆ ಸೋಮಾರಿಗಳನ್ನು ಸಾಮಗಾನ ನಿರತನನ್ನಾಗಿ ಮಾಡಿ, ಸೋಮಾರಿತನವನ್ನು ಹೋಗಲಾಡಿಸಲು ಈ ಸಾಮ ವಿಧಾನ ಬ್ರಾಹ್ಮಣವನ್ನು ಜ್ಞಾನಿಗಳು ತಮ್ಮ ಜ್ಞಾನದಿಂದ ರೂಪಿಸಿರಬಾರದೇಕೆ ?

ಮನುಷ್ಯನಿಗೆ ಆಸೆಯೇ ಪರಮ ಶತ್ರುವಾದರೂ ಸಹ ಈ ಶತ್ರುವಿನ ಶತ್ರುತ್ವ ಅರಿವಾಗುವುದಕ್ಕೆ ಮೊದಲು ಈ ಶತ್ರುವಿನಿಂದಲೇ ಮನುಷ್ಯನನ್ನು ನಿಗ್ರಹಿಸಬಹುದೆಂಬುದು ಎಂತಹ ವಿಚಿತ್ರ ? ಬಹುಶಃ ಈ ಉದ್ದೇಶ ಮಾತ್ರದಿಂದಲೇ ಸಾಮವಿಧಾನ ಬ್ರಾಹ್ಮಣವು ರೂಪಿತವಾಗಿರಬಾರದೇಕೆ ?

ಯಾಗಾನುಷ್ಠಾನಗಳು ಕ್ಷಯವಾದಾಗ, ಬಹುಶಃ ಅನೇಕ ಜನರು ನಿರುದ್ಯೋಗಿಗಳಾಗಿ, ಆ ನಿರುದ್ಯೋಗ ನಿವಾರಣೆಗಾಗಿ ಅಥವಾ ಆ ನಿರುದ್ಯೋಗಿಗಳನ್ನು ದುಷ್ಕಾರ್ಯ ವಿಮುಖರನ್ನಾಗಿ ಮಾಡಿ, ಸಮಾಜದ ಸಂಪತ್ತು, ಸುಖ, ಸಂತೋಷಗಳನ್ನು ಕಾಪಾಡಲು ಸಾಮವಿಧಾನ ಬ್ರಾಹ್ಮಣವು ರೂಪಿತವಾಗಿರಬಾರದೇಕೆ ?

ವೇದಗಳನ್ನು ರಕ್ಷಿಸಲು ಹಾಗೂ ಮುಂದಿನ ಪೀಳಿಗೆಗೆ ವೇದದ ಸಹಾಯವನ್ನು ಒದಗಿಸಲು ಶ್ರೌತಕಾರ್ಯಗಳಿಲ್ಲದ ವಿಧಾನವನ್ನು 'ಸಾಮವಿಧಾನ' ಬ್ರಾಹ್ಮಣದಲ್ಲಿ ರೂಪಿಸಿರಬಾರದೇಕೆ ?

ಎಲ್ಲ ವೇದಗ್ರಂಥಗಳಂತೆಯೇ 'ಸಾಮವಿಧಾನ'ದ ಕರ್ತೃವೂ ಸಹ ಯಾರೆಂದು ಇದುವರೆಗೂ ತಿಳಿಯಲಾಗಿಲ್ಲ. ಕೇವಲ ಪ್ರಜಾಪತಿ, ಹಾಗೂ ಇತರ ದೇವತೆಗಳ ವಾಕ್ಯವೂ ಹಾಗೂ ಅವರಿಂದ ನಮಗೆ ಈ 'ಸಾಮವಿಧಾನ'ವು ಬಂದಿದೆಯೆಂದು ಮಾತ್ರ ತಿಳಿದುಬರುತ್ತದೆ.

ಸಾಮ ವಿಧಾನ ಬ್ರಾಹ್ಮಣದ ಪ್ರತಿರೂಪವಾಗಿರುವ ಇನ್ನೆರಡು ಬ್ರಾಹ್ಮಣಗಳು ಋಗ್ವಿಧಾನ (ಋಗ್ವೇದ), ತೈತ್ತಿರೀಯ ಆರಣ್ಯಕಂ (ಯಜುರ್ವೇದ). ಆದರೆ ಈ ಎರಡೂ ಗ್ರಂಥಗಳನ್ನು ಬ್ರಾಹ್ಮಣವೆಂದು ಪರಿಗಣಿಸಲಾಗಿಲ್ಲ.

ಸಂಕ್ಷಿಪ್ತವಾಗಿ ಸಾಮ ವಿಧಾನ ಬ್ರಾಹ್ಮಣದ ಅಧ್ಯಾಯಗಳಲ್ಲಿ ನಿರೂಪಿಸಲಾಗಿರುವ ಜ್ಞಾನಕಾಂಡ ವಿಚಾರವನ್ನು ಪರಿಶೀಲಿಸೋಣ.

**ಪ್ರಥಮ ಅಧ್ಯಾಯ :**

**ಖಂಡ :** 1. ಜ್ಞಾನದ ಮೂಲ ಬ್ರಹ್ಮ. ಜ್ಞಾನದ ಶ್ರೇಷ್ಠತೆ, ಜ್ಞಾನದ ಪವಿತ್ರತೆ, ಜ್ಞಾನದ ಉತ್ಕೃಷ್ಟತೆ, ಜ್ಞಾನದ ಉದಾತ್ತತೆ, ಜ್ಞಾನದ ನಿಷ್ಪಕ್ಷಪಾತತೆ : ಜ್ಞಾನದ ಶಿಕ್ಷಣ, ಜ್ಞಾನದಿಂದ ಲಭಿಸುವ ಸುಖ, ಸಂತೋಷ, ಮನೋದೃಢತೆ, ಸತ್ಕಾರ್ಯಾನುಷ್ಠಾನ, ಜ್ಞಾನಿಯಿಂದ ಸಮಾಜಕ್ಕೆ ಉಪಕಾರ, ಜ್ಞಾನಿಗೆ ಸಮಾಜದಲ್ಲಿರುವ ಉನ್ನತ ಸ್ಥಾನಮಾನ.

2. ಮೂರು ವಿಧವಾದ ಕೃಚ್ಛ್ರ (ತಪಸ್ಸು)ಗಳ ವಿವರಣೆ. ತ್ಯಾಗದ ನಿರ್ಮೋಹತ್ವ ಹಾಗೂ ದಾನದ ಸ್ವರೂಪವು. ಇದರಿಂದ ಜ್ಞಾನವೃದ್ಧಿ.

3. ನಿರಂತರ ಅಧ್ಯಯನ ಮತ್ತು ಸಂಶೋಧನೆಯ ಆಚರಣೆಯ ನಿಯಮಗಳು.

4. ತ್ರಿರಾತ್ರ, ಪಂಚರಾತ್ರ, ಸಪ್ತರಾತ್ರವೆಂಬ ಮೂರು ವಿಧವಾದ ಅಧ್ಯಯನ, ಸಂಶೋಧನೆಯ ನಿಯಮಗಳು. ಈ ನಿಯಮಾಚರಣೆಯಿಂದ ಉಂಟಾಗುವ ಮನಸ್ಸಿನ ನೆಮ್ಮದಿ ; ಬಹುವಿಧ ಜ್ಞಾನವನ್ನು ಪಡೆಯುವ ವಿಧಾನಗಳು.

5. ಮನಸ್ಸನ್ನು ದುಷ್ಕಾರ್ಯ ಪ್ರೇರಣೆಯಿಂದ ವಿಮುಕ್ತಗೊಳಿಸುವ ವಿಧಾನಗಳು : ಇದರಿಂದ ಸಮಾಜದ ಶಾಂತಿ ರಕ್ಷಣೆ, ಸಮಾಜದ ಚಿತ್ತಸ್ವಸ್ಥತೆ.

6. ಮನಸ್ಸನ್ನು ಪರಪೀಡನಪ್ರೇರಣೆಯಿಂದ ವಿಮುಕ್ತಗೊಳಿಸುವ ವಿಧಾನಗಳು.

7. ಮನಸ್ಸನ್ನು ಆಸೆ, ಅತಿಯಾದ ಆಸೆ, ದುರಾಸೆಗಳಿಂದ ವಿಮುಕ್ತಗೊಳಿಸುವ ವಿಧಾನಗಳು. ಇದರಿಂದ ಆತ್ಮತೃಪ್ತಿ, ಸಮಾಜದ ತೃಪ್ತಿ ಸಾಧನೆ.

8. ಸತ್ಕಾರ್ಯಕ್ಕಾಗಿ ದೃಢಚಿತ್ತತೆಯನ್ನು ರೂಪಿಸುವುದು, ಕಷ್ಟ ಕಾಲದಲ್ಲಿಯೂ ಜ್ಞಾನ ವಿಮುಖನಾಗದಿರುವುದು, ಯಾವುದೇ ರೀತಿಯ ಪ್ರಾಪಂಚಿಕ ದುಃಖದ ಸಮಯದಲ್ಲಿಯೂ ಅಜ್ಞಾನ ಹೊಂದದಿರುವುದು.

## ದ್ವಿತೀಯ ಅಧ್ಯಾಯ :

**ಖಂಡ :** 1. ಮರಣ ಭಯ ವಿಮುಖ ಸಾಧನೆ, ಜ್ಞಾನವನ್ನು ಇತರರಿಗೆ ದಾನಮಾಡಿ, ಅದರಿಂದ ಜ್ಞಾನವನ್ನು ರಕ್ಷಿಸುವ ವಿಧಾನ, ಜ್ಞಾನದ ನಿರಂತರ ಚಿರಂಜೀವತ್ವದ ಸಾಧನೆಯ ವಿಧಾನ.

2. ಅನಾರೋಗ್ಯದಿಂದ ಜ್ಞಾನವಿಮುಖನಾಗದಿರುವಿಕೆ, ದುಷ್ಟ ಮನಸ್ಸನ್ನು ಜಯಿಸುವ ವಿಧಾನ.

3. ಪ್ರಾಪಂಚಿಕ ಜಯಾಪಜಯಗಳ ಮೋಹದಿಂದ ವಿಮುಖತೆ ಹೊಂದುವ ವಿಧಾನ, ಪರಪೀಡನೆ, ಮೋಹದಿಂದ ಜ್ಞಾನ ನಾಶದ ರಕ್ಷಣಾ ವಿಧಾನ, ಅಜ್ಞಾನದ ಪರಿಧಿಯಿಂದ ರಕ್ಷಿಸಿಕೊಳ್ಳುವ ವಿಧಾನ.

4. ಸಮಾಜದ ಇತರ ಜನರಿಗೆ ಈ ಕ್ಷೇಮವನ್ನುಂಟು ಮಾಡಲು ಮಾಡಬೇಕಾದ ಜ್ಞಾನ ಬೋಧನಾ ವಿಧಾನ, ಸಮಾಜದ ಎಲ್ಲ ಜನರ ರಕ್ಷಣಾ ವಿಧಾನ ಹಾಗೂ ಅನೇಕ ವಿಧವಾದ ಭಯಗಳಿಂದ ಸಮಾಜಕ್ಕೆ ರಕ್ಷಣೆ ನೀಡುವ ವಿಧಾನ, ಸ್ವಾರ್ಥತ್ಯಾಗದ ಅವಶ್ಯಕತೆ.

5. ಜ್ಞಾನಪ್ರಾಪ್ತಿಯ ವಿಧಾನ, ಜ್ಞಾನದ ವಿವಿಧ ಸ್ವರೂಪಗಳು.

6. ಲೋಕದ ಕಲ್ಯಾಣಗಳ ಸ್ವರೂಪ, ಪ್ರಾಪ್ತಿ ವಿಧಾನಗಳು, ಲೋಕಜ್ಞಾನದ ಅವಶ್ಯಕತೆ, ದುಷ್ಕರ್ಮಿಗಳ ಮನಸ್ಸನ್ನು ಪರಿವರ್ತಿಸುವ ವಿಧಾನ, ನಿರ್ಲಿಪ್ತತೆಯ ಸಾಧನೆ.

7. ಪರಮಜ್ಞಾನ (ಬ್ರಹ್ಮಜ್ಞಾನ) ಪ್ರಾಪ್ತಿ ವಿಧಾನ ಅನೇಕ, ಶ್ರುತಿ. ಇತಿಹಾಸ, ಪುರಾಣಗಳ ಜ್ಞಾನಪ್ರಾಪ್ತಿಯ ಅವಶ್ಯಕತೆ ಮತ್ತು ವಿಧಾನ, ಸಮಾಜದ ಸುಖ ಶಾಂತಿಗಾಗಿ ಪ್ರತಿಯೊಬ್ಬನೂ ಅನುಸರಿಸಬೇಕಾದ ನಡವಳಿಕೆಯ ವಿಧಾನ.

8. ಮುಂದಿನ ಸಂತತಿಗೆ ಹಾಗೂ ತನ್ನ ಅನುಚರರಿಗೆ ಜ್ಞಾನವನ್ನು ಬೋಧಿಸ

ಬೇಕಾದ ಕರ್ತವ್ಯ ಹಾಗೂ ವಿಧಾನ. ಇತರರನ್ನು ಸಮಾಜದ ಉತ್ತಮ ಪ್ರಜೆಗಳನ್ನಾಗಿ ರೂಪಿಸಬೇಕಾದ ಕರ್ತವ್ಯ ಮತ್ತು ವಿಧಾನ.

**ತೃತೀಯ ಅಧ್ಯಾಯ :**

**ಖಂಡ :** 1. ಜ್ಞಾನದಿಂದ ಅಜ್ಞಾನ ನಾಶ ಉಂಟಾಗಿ ದೊರೆಯುವ ಮಾನಸಿಕ ಸ್ವಸ್ಥತೆ, ಬಹುವಿಧವಾದ ಪ್ರಾಪಂಚಿಕ ಮೋಹಗಳಿಂದ ವಿಮುಖಗೊಳಿಸುವ ಜ್ಞಾನಮಾರ್ಗಗಳು.

2. ಬಹುವಿಧವಾದ ಪ್ರಾಪಂಚಿಕ ಸುಖಗಳಿಗೆ ಪ್ರಾಮುಖ್ಯ ನೀಡದೆ, ಪ್ರಾಪಂಚಿಕ ಜ್ಞಾನದಿಂದ ಸಮಾಜಕ್ಕೆ ಉಪಕಾರ ಮಾಡುವ ವಿಧಾನಗಳು.

3. ಯಾವುದೇ ರೀತಿಯ ಲೌಕಿಕ ಸುಖಗಳನ್ನು ಸ್ವಾರ್ಥಕ್ಕಾಗಿ ಉಪಯೋಗಿಸಿ ಕೊಳ್ಳಬಾರದೆಂಬ ಜ್ಞಾನ ಪ್ರಾಪ್ತಿ ವಿಧಾನ.

4. ಯಾವುದೇ ವಿಧವಾದ ಲೌಕಿಕ ಸಂದರ್ಭಗಳಲ್ಲಿಯೂ ಜ್ಞಾನ ವಿಮುಖನಾಗದಿರುವಿಕೆ. ಚಿರಕಾಲ ಸಮಾಜ ಸುಖಕ್ಕಾಗಿ ಜ್ಞಾನದ ರಕ್ಷಣೆ ಹಾಗೂ ಬೋಧನೆಯ ವಿಧಾನಗಳು.

5. ಸಮಾಜ ಸುಖ ಶಾಂತಿಗಾಗಿ. ತೃಪ್ತಿಗಾಗಿ ಮಾಡಬೇಕಾದ ನಿಃಸ್ವಾರ್ಥ ಕಾರ್ಯಗಳ ವಿವರಣೆ. ಧರ್ಮಕಾರ್ಯ ಪರಿಪಾಲನೆ ಹಾಗೂ ದುಷ್ಕಾರ್ಯ ನಿಗ್ರಹಣವಿಧಾನಗಳು.

6. ಅಜ್ಞಾನವನ್ನು ಜಯಿಸಲು ಮಾಡಬೇಕಾದ ವಿಧಾನಗಳು. ಅಹಂಕಾರವನ್ನು ಜಯಿಸಬೇಕಾದ ವಿಧಾನಗಳು.

7. ಯಾವುದೇ ದುಷ್ಟಶಕ್ತಿಯಿಂದ ಉಂಟಾಗುವ ಪೀಡನೆ ತೊಂದರೆಯನ್ನು ನಿರೋಧಿಸುವ ಜ್ಞಾನಮಾರ್ಗ ವಿವರಣೆ. ನಿರ್ಮೋಹತ್ವದ ಅವಶ್ಯಕತೆ. ವಿಧಾನಗಳು.

8. ಜ್ಞಾನ ಮಾರ್ಗದಲ್ಲಿ ನಡೆಯಲುಂಟಾಗುವ ಭೀತಿಯ ನಿವಾರಣೆ.

9. ಮನುಷ್ಯ ಜನ್ಮದ ಸಾರ್ಥಕತೆ. ಜ್ಞಾನದಿಂದ ಲೋಕಮಂಗಳ ಉಂಟಾಗುವುದರಿಂದ ಜ್ಞಾನ ಮಾರ್ಗದಿಂದ ದೊರೆಯುವ ಉತ್ತಮ ಫಲ ಹಾಗೂ ಅಜ್ಞಾನ ಮಾರ್ಗದಿಂದ ದೊರೆಯುವ ನೀಚಫಲಗಳ ವಿವರಣೆ. ಈ ಜ್ಞಾನಮಾರ್ಗದ ಪ್ರಸಾರದ ಸರಣಿ. ಈ ಜ್ಞಾನಮಾರ್ಗ ಪ್ರಸರಣೆಯ ಅವಶ್ಯಕತೆ.

ಈ ವಿಧಾನದಲ್ಲಿ ನಾವು ಸಾಮವಿಧಾನ ಬ್ರಾಹ್ಮಣವನ್ನು ಅಧ್ಯಯನ ಮಾಡಿದಾಗ, ಜ್ಞಾನಮಾರ್ಗಕ್ಕೆ 'ಸಾಮಗಾನ'ವೇ ಉತ್ತಮ ಮಾರ್ಗವೆಂದು ತಿಳಿಸಿರುವ ವಿಚಾರವನ್ನು ಯಾರೂ ಅಲ್ಲಗಳೆಯಲಾಗದು. ಶ್ರೀ ರಾಮಾನುಜಾಚಾರ್ಯರು ಲೋಕ ಕಲ್ಯಾಣಕ್ಕಾಗಿ 'ಭಕ್ತಿಮಾರ್ಗ' ಪ್ರತಿಪಾದಿಸಿರುವುದು ಉತ್ತಮ ಫಲ ನೀಡಿರುವುದನ್ನು ನಾವು ನಮ್ಮ ಕಣ್ಣಮುಂದೆ ಕಾಣುತ್ತಿದ್ದೇವೆ. ಅದೇ ರೀತಿ 'ಸಾಮಗಾನ' ಮಾರ್ಗವು ಉತ್ತಮ ಫಲ ನೀಡುವುದಂತೂ ಖಾತರಿಯಲ್ಲವೇ ?

## ಗ್ರಂಥಾವಲೋಕನ


1. ಸಾಮವಿಧಾನ ಬ್ರಾಹ್ಮಣ : ಡಾ॥ ಬಿ. ರಾಮಚಂದ್ರ ಶರ್ಮ, ಕೇಂದ್ರೀಯ ಸಂಸ್ಕೃತ ವಿದ್ಯಾಪೀಠ, ತಿರುಪತಿ–1964 (ಸಂಸ್ಕೃತ).

2. ಜೈಮಿನೀಯ ಉಪನಿಷತ್ ಬ್ರಾಹ್ಮಣ : ಡಾ॥ ಬಿ. ರಾಮಚಂದ್ರ ಶರ್ಮ, ಕೇಂದ್ರೀಯ ಸಂಸ್ಕೃತ ವಿದ್ಯಾಪೀಠ. ತಿರುಪತಿ–1967 (ಸಂಸ್ಕೃತ).

3. ಸಾಮವಿಧಾನ ಬ್ರಾಹ್ಮಣ : ವಿ.ಆರ್. ಶ್ರೀನಿವಾಸನ್, ಜ್ಞಾನಭಾಷ್ಯ (ಇಂಗ್ಲಿಷ್), (ಅಪ್ರಕಟಿತ ಗ್ರಂಥ).

4. ಛಾಂದೋಗ್ಯೋಪನಿಷತ್ : ಸ್ವಾಮಿ ಆದಿದೇವಾನಂದ. ರಾಮಕೃಷ್ಣಾಶ್ರಮ, ಮೈಸೂರು–1989 (ಕನ್ನಡ).

5. ಅಮೆರಿಕಾ ಪ್ರಾಚೀನ ಸಮಾಜ ಪತ್ರಿಕಾ—1894 ಜೈಮಿನೀಯ ಉಪನಿಷತ್ ಬ್ರಾಹ್ಮಣ—ಹನ್ಸ್ ಓರ್ಟೆಲ್ (ಇಂಗ್ಲಿಷ್)

6. ಜೈಮಿನೀಯ ಉಪನಿಷತ್ ಬ್ರಾಹ್ಮಣ : ವಿ.ಆರ್. ಶ್ರೀನಿವಾಸನ್—(ಅಪ್ರಕಟಿತ ಗ್ರಂಥ), (ಕನ್ನಡ).

# ಕೆಳದಿ ಸೋಮಶೇಖರ ನಾಯಕನ ಕಾಲದ ಅಪ್ರಕಟಿತ ಕೃತಿಯ ತಾಳೆಯೋಲೆ ಹಸ್ತಪ್ರತಿ*

**ಕೆಳದಿ ವೆಂಕಟೇಶ್**

ಶಿವಮೊಗ್ಗ ಜಿಲ್ಲೆಯ ಸೊರಬಲ ತಾಲೂಕು ಆನವಟ್ಟಿಯ ಸಮೀಪ ಮೂಡಿ ಎಂಬ ಗ್ರಾಮದಲ್ಲಿ ನನ್ನ ತಂದೆ ಶ್ರೀ ಗುಂಡಾಜೋಯಿಸರ ಸೂಚನೆಯ ಮೇರೆಗೆ ಪುರಾತನ ಸಾಮಗ್ರಿ ಸಮೀಕ್ಷೆ ಕೈಗೊಳ್ಳುವ ಅವಕಾಶ ನನಗೆ ಒದಗಿತ್ತು. ಈ ಮೇರೆಗೆ ಆನವಟ್ಟಿಯ ಶ್ರೀ ಕೊಸೇರಿರಾಯರ ಮುಖಾಂತರ ಶ್ರೀ ಮೂಡಿಲಿಂಗಪ್ಪ ಒಡೆಯರ ಮನೆಯಲ್ಲಿ ಚೆಲ್ಲಾಪಿಲ್ಲಿ ಚೆದರಿದ್ದ ಓಲೆಗರಿಗಳಲ್ಲಿ ಹಲವು ತಾಳೆಯೋಲೆಗಳನ್ನು ಅವಲೋಕಿಸಿದಾಗ ಬಿಡಿಯೋಲೆಯೊಂದರಲ್ಲಿ ಲಭಿಸಿದ ಕೆಳದಿ ಸೋಮಶೇಖರ ನಾಯಕನ ಕಾಲದ ಕೃತಿಯೊಂದನ್ನು ವಿದ್ವಾಂಸರ ಅವಗಾಹನೆಗಾಗಿ ಅದರ ಪಾಠವನ್ನು ಇದ್ದಂತೆಯೇ ನಿರೂಪಿಸಲಾಗಿದೆ. ಒಂದೇ ಗರಿಯ ತಾಳೆಯೋಲೆಯ ಪ್ರಮಾಣ ಉದ್ದ 33.7 ಸೆಂ.ಮೀ. ಅಗಲ 4.8 ಸೆಂ.ಮೀ ; ಅಕ್ಷರ ಸಂಖ್ಯೆ 44 ಸಾಲು 7 : ಓಲೆಯ ಅಂತ್ಯದಲ್ಲಿ ಪುಟಸಂಖ್ಯೆ ೫೪ ಎಂದು ಉಲ್ಲೇಖಿಸಲಾಗಿದೆ. ಸ್ಥಿತಿ : ಅಸಮಗ್ರ. ಲಿಪಿ ; ಕನ್ನಡ ; ಭಾಷೆ ; ಕನ್ನಡ.

**ಪಾಠ** ಮುಂಭಾಗ :

ಸಾಲು 1. ಶ್ರೀ ಗುರು ಬಸವಲಿಂಗಾಯನಮಃ ॥ ಲಿಂಗಸಾವಧಾನ
ಪ್ರಣಮು ಸಂಬಂಧ ಸಮಾಧಿಕ್ರಿಯುದ ವೃದ್ವರಣೆಯು
ಬರವುದಕ್ಕೆ ಶುಭಮಸ್ತು ॥ ಭಾವನಿವರ್ಸದ ಷಟ್ಪ

2. ದ॥ ಶ್ರಿಮದಮಲಾನಂದ ಬಂಧುರ ಸೊಮಶೆಖರ
ಸೆವಿತ ಶರಣ ಸುರಕುಜ । ಶ್ಯಾಮಕಂಧರ ಗಮನಸವರದಂ
ರಜತಗಿರಿ ನಿಜಧಾಮಾ ॥ ಕೊಮಲಾಂಗದ ಕಮಲಧ

3. ರಶಿರ । ಕಾಮಿತಾರ್ತ್ಥವನೀವ ಸುಗುಣ । ನಾಮ ಮುರಿಗೆಯು
ದೆವಮತಿಯುನಗಿತ್ತು ಪಾಲಿಪ್ಪುದೂ ॥೧॥ ಪಾಲು ಕುರುಕೆಯು
ಸೊಮರಾಧ್ಯ । ಖಿಲವೊ

---

*. ಶಿವಮೊಗ್ಗದಲ್ಲಿ ಜರುಗಿದ ಕರ್ನಾಟಕ ಇತಿಹಾಸ ಕಾಂಗ್ರೆಸ್ ಸಮ್ಮೇಳನದಲ್ಲಿ ನಾನು ಮಂಡಿಸಿದ ಪ್ರಬಂಧ.

4. ಗ್ಗಿಯ ಮಾಡಿದವರು। ಎಪ್ಪೊಲ ಚಿಕ್ಕ ಮಾದಣ ನಿರ್ಮಲ ಕದಿರ ರೆಮ್ಮೈಯ್ಯ॥ ಮೂಲ ಮಂತ್ರಧ್ಯಾನನ ಜಗಂಣ। ಕಾಲಮೃ-ತ್ಯುವನಳಿದನಿಂ
5. ಜಿಯು। ಮೆಲೆನಿಪ ಸಾಮಾಧಿ ಸೋಮಯ್ಯಗಳು ಹಳ್ಳಪ್ಪ ಮೊದಲಾದ ॥೨॥ ರಾಗವಂಕ ನಮಃ ಶಿವಾಯನ। ಭೋಗ ಶಿಷ್ಯ ಹಿಮಗಿರಿಶ್ವರ।
6. (ಅ) ಗಮಕ್ಕತಿ ನಿಲುಕದಿಪ ಶಿವಶರಣರಿವರೆಲ್ಲಾ। ನಾಗ ಭೋಗದಿಕ-ರೆಂದೆನಿಸಿ ಮೆರೆದರು ಕೆಳಿಸಪಣಕರದರೊಲ್ಲದ। ಆಗಿ ನಿಂ ಸಮಾಧಿಕ್ರಿಯ್ಯೆ। ಭೂ
7. (ತ್ರುಟಿತ) ನಿಸಿ ಮೆರೆದರು ಕೆಳಿಸಜ್ಜನರೂ ॥೩॥ ಪ್ರಾಣ ವಾದಯಿಷ್ಟಲಿಂಗವು। ಜಾಣ ವಿರಶೈವವ್ರತಗಳು। ಕ್ಕೊಣಿ (ಕ್ಷೊ) ಯೊಳಗೆ ಲುಪ್ತವಾಗಲು ಪ್ರಾಣ

ಹಿಂಭಾಗ

1. (ತ್ರುಟಿತ) ಪ್ರಾಣಂಬಿಡದೆ ಮತ್ತೆ ತಾವು। ಮಾಣದಂತೆ ಪ್ರಾಯಶ್ಚಿತ್ತವು। ಮೇಣಿಯದ ಕೆಂಯಿಲ್ಲ (ತ್ರುಟಿತ) (ಓಲೆ ಮುರಿದಿದೆ)
2. ಲಿಂಗವು। ಕ್ರಿಷ್ಟಿಯೊಳಗೆ ಬಿದ್ದು ಹೊದೊಡೆ। ಯಿಷ್ಟದೊಡನೆ ಪ್ರಾಣಬಿಡವುದು ಶ್ರೆಷ್ಠರಾದವರೂ॥ ನಿಷ್ಠೆ ಇಲ್ಲದ ಪ್ರತಿ ಯಲಿಂಗವ। ಕಷ್ಟತ
3. ನದಿಂ ಕಟ್ಟಿಕೊಂಡಡೆ। ಭ್ರಷ್ಟತನದಿಂ ನರಕಗತಿಯೊಳು ಬಿದ್ದು ಹೊಗುವನೂ ॥೫॥ ಬುದ್ಧಿವಂತಾನಾದ ಪುತ್ರನ ಶುದ್ಧ ಲಿಂಗವು ನಿಂ
4. ಸ ಪ್ರಾಣ। ಸಿದ್ಧನಾಗಿಯೆ ನಿನು ಬದುಕುವನಿತು ಪರಿತನಕಾ॥ ಬದ್ಧವಾಗಿಯೆ ಯಿರುವತನಕಂ। ಯೆದ್ದು ತ್ರಿಕಾಲದೊಳು ಪೂ
5. ಜೆಯ। ನುದ್ಧರಿಸಿ ಶಿವಲಿಂಗ ಪ್ರೊಗಲು ಪ್ರಾಣ ಬಿಡಬೆಕು ॥೬॥ ಶಿರವು ನಾಳಂಗೊಮುಖವು ಕ (ಂ)। ಯಿರಡೆ ನಡುವಿನ ಬಟು
6. ವು ಪಿಠವು। ನಿರುತ ಷಡ್ವಿಧ ಸ್ಥಾನದಲ್ಲಿಯೆ ಭಿಂನವಾಗಿರಲೂ॥ ಮರಳಿ ಆಲಿಂಗವನು ತಳೆವದೆ। ಪರಮಯೋಗಿಶನೊದೊಡಾಗಲಿ। ದೊ
7. ರೆ ನರಕದಲಿ ಬಿದ್ದು ಹೊಗುವನೆಂಬ ಶ್ರುತಿಯುಂಟೂ ॥೭॥ ಗೊಳುಕಾದಿಯೆ ಪಿಠ ತನಕಂ। ಸೆಳೆಯೆ ಕೂದಲು ಪಿಡೆಯೆ ನಲ್ಲಿನ। ಕಾ-

**ವಿಶೇಷ :**

ಕೆಳದಿಯ ಇತಿಹಾಸದಲ್ಲಿ ಅವಲೋಕಿಸಿದಾಗ ಇಬ್ಬರು ಸೋಮಶೇಖರ ನಾಯಕರು ಕಾಣಸಿಗುತ್ತಾರೆ. ಭದ್ರಪ್ಪ ನಾಯಕನ ಮಗ ಹಿರಿಯ ಸೋಮಶೇಖರ ನಾಯಕ (ಕ್ರಿ. ಶ. 1664–1672) ಮತ್ತು ಹಿರಿಯ ಬಸಪ್ಪ ನಾಯಕನ ಮಗ ಇಮ್ಮಡಿ ಸೋಮಶೇಖರ ನಾಯಕ (ಕ್ರಿ. ಶ. 1715–1740). ಹೀಗೆ ಇಬ್ಬರು ಆಡಳಿತ ನಡೆಸಿದರು. ಇಮ್ಮಡಿ ಸೋಮಶೇಖರನ ಕಾಲದಲ್ಲಿ ಹಲವು ಕೃತಿಗಳು ಬೆಳಕು ಕಂಡಿರುವುದನ್ನು ನೋಡಬಹುದು.[1] ಈ ಹಸ್ತಪ್ರತಿಯಲ್ಲಿ ಕಂಡುಬರುವ ಕೃತಿಯ ಶಿರೋನಾಮ "ಸಮಾಧಿ ಕ್ರಿಯದ ಪದ್ಧರಣೆ"ಯು "ಸೋಮಶೇಖರ ಸೇವಿತ ಶರಣ ಸುರಕುಜ। ಶ್ಯಾಮಕಂಧರ ಗಮನವರದಂ ರಜತಗಿರಿ ನಿಜಧಾಮಾ" ಎಂಬ ಉಲ್ಲೇಖನವು ಸೋಮಶೇಖರ ನಾಯಕನ ಕಾಲದಲ್ಲಿ ಕವಿಯೊಬ್ಬನಿಂದ ವಿರಚಿತ ವಾಗಿರುವುದಾಗಿ ವ್ಯಕ್ತಪಡುತ್ತದೆ.

---

1. ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ ; ಸಾ. ಶಿ. ಮರುಳಯ್ಯ, 1979.
2. ಈ ಪ್ರಬಂಧ ಸಿದ್ಧಪಡಿಸುವಲ್ಲಿ ಸಹಕರಿಸಿದ ಡಾ. ತಾಳ್ತಜೆ ವಸಂತಕುಮಾರ್ ಹಾಗೂ ಕೆಳದಿ ಗುಂಡಾ ಜೋಯಿಸರಿಗೆ ಕೃತಜ್ಞತೆಯನ್ನು ಸಲ್ಲಿಸುವೆನು.
   ಕೆಳದಿ ವಸ್ತು ಸಂಗ್ರಹಾಲಯದವರ ಈ ಹಸ್ತಪ್ರತಿಯನ್ನು ಉಪಯೋಗಿಸಿಕೊಳ್ಳಲು ಅನುಮತಿಯಿತ್ತ ವಸ್ತು ಸಂಗ್ರಹಾಲಯದ ಅಧಿಕಾರಿಗಳಿಗೂ ಕೃತಜ್ಞನಿದ್ದೇನೆ.

# ಸಂಧಿ ವಿಕಲ್ಪ – ಒಂದು ಮರು ಅವಲೋಕನ

ಎಂ. ಜಿ. ನಾರಿ

ಹಳಗನ್ನಡ ಭಾಷೆಯ ಬರವಣಿಗೆಯ ಲಕ್ಷಣದಂತೆ ಸ್ವರಾದಿ ಪದ ಹಿಂದಿನ ಪದದೊಂದಿಗೆ ಜೊತೆಗೂಡಿಯೇ ಬರುತ್ತಿದ್ದಿತು. ಹೀಗೆ ವಾಕ್ಯ ರಚನೆಯಲ್ಲಿ ಪದಗಳ ಜೋಡಣೆಯ ಅನುಕ್ರಮಣಿಕೆ ಇರುತ್ತಿದ್ದಿತು.[1] ಹೀಗೆ ಜೊತೆಗೂಡುವಾಗ ಸಂಧಿ ಪ್ರಕ್ರಿಯೆ (ಲೋಪ, ಆಗಮ, ಆದೇಶ) ನಡೆಯುತ್ತಿತ್ತು. ಮತ್ತೆ ಕೆಲವೊಮ್ಮೆ ಯಾವ ಬದಲಾವಣೆ ಕ್ರಿಯೆ ನಡೆಯದೆ, ವ್ಯಂಜನ ಸ್ವರಗಳ ಕೂಡುವಿಕೆ ಸಂಭವಿಸುತ್ತಿತ್ತು. ಇದನ್ನು ಕೇವಲ ಅವಿರಳೋಚ್ಚಾರಣೆ ಎನ್ನಬಹುದು. ವಾಕ್ಯದ ಯಾವ ಸಂದರ್ಭದಲ್ಲೂ ಸ್ವರಾದಿ ಪದಗಳನ್ನು ವಿರಳವಾಗಿ ಬರವಣಿಗೆಯಲ್ಲಿ ತೋರ್ಪಡಿಸಲು ಅಥವಾ ವಾಚಿಸಲು (?) ಸಾಧ್ಯ ಇರುತ್ತಿರಲಿಲ್ಲವೇನೊ ![2] ಆದರೂ ಇದಕ್ಕೆ ಕೆಲವು ಸಂದರ್ಭಗಳಲ್ಲಿ ವಿನಾಯಿತಿಯೂ ಇದ್ದಿತು. ಅಂಥ ಸಂದರ್ಭಗಳನ್ನು ಕೇಶಿರಾಜ ಸವಿವರವಾಗಿಯೇ (ಸೂತ್ರ : 66, 67, 68 ಮತ್ತು 72) ಅವಲೋಕನ ಮಾಡಿದ್ದಾನೆ. ಇದು ವಿಸಂಧಿಯ ವಿಷಯವಾಯಿತು.[3]

---

1. “ಸಂಸ್ಕೃತದಲ್ಲಿ ಸಂಧಿಕಾರ್ಯ ಕಡ್ಡಾಯ. ಕನ್ನಡ ಕವಿಗಳೂ ಸಂಸ್ಕೃತದ ಮಾದರಿಯನ್ನು ಅನುಸರಿಸಿ ಪದ್ಯಗಳಲ್ಲಿ ಮಾತ್ರವಲ್ಲದೆ ಗದ್ಯದಲ್ಲೂ ಸಂಧಿ ನಿಯಮವನ್ನು ಅನುಸರಿಸುತ್ತ ಬಂದಿದ್ದಾರೆ” (ಎಂ.ವಿ.ಸೀ., ಪ್ರಾ.ಕ.ವ್ಯಾ.ಗಳು, ಪ್ರ.ಮು : 1979, ಪುಟ : 48) ಅಷ್ಟೆ ಅಲ್ಲ ಅದನ್ನು ಕಡ್ಡಾಯವೆನ್ನುವಂತೆ ಅಲಿಖಿತವಾಗಿ ಪರಿಪಾಲಿಸುತ್ತಲೂ ಅನುಲ್ಲಂಘನೀಯ ಶಾಸನವಾಗಿ ನಿರ್ಮಾಣ ಮಾಡಿಕೊಂಡರು.
2. ಸಂಧಿಗೆ ಒಗ್ಗದ ಕವಿಗೆ ವಿಸಂಧಿ ದೋಷವಾಗಿ ಕಂಡಿರಬೇಕು. (ಪೂರ್ವೋಕ್ತಗ್ರಂಥ. ಪುಟ : ಅದೇ)
3. (i) ಇದು ನೇರವಾಗಿ ಕಾವ್ಯಕ್ಕೆ ಸಂಬಂಧಿಸಿದ ದೋಷ : ಹೀಗೆಂದು ಕವಿರಾಜಮಾರ್ಗದಲ್ಲಿ ನಿರೂಪಣೆಗೊಂಡಿದೆ. ಇದನ್ನೇ ನಾಗವರ್ಮ ಕೇಶಿರಾಜರು ಅನುಸರಿಸಿ ಭಾಷಾ ರಚನೆಯ ವಿಧಾನಕ್ಕೆ ಅನ್ವಯಗೊಳ್ಳುವಂತೆ ವಿವರಿಸಿದ್ದಾರೆ. ವಾಮನನಿಂದ ಸ್ಫೂರ್ತಿಗೊಂಡ ಶ್ರೀ ವಿಜಯ ಇದನ್ನು ಕನ್ನಡಕ್ಕೆ ಅನ್ವಯಿಸಿ ವಿಶ್ಲೇಷಿಸಿದ್ದಾನೆ. ಆದರೆ ಇದು ನಿರ್ದಿಷ್ಟವಾಗಿ ಕಾವ್ಯದೋಷಕ್ಕೆ ನಿಮಿತ್ತವೆಂದು ಗೆರೆ ಕೊರೆಯಲಾಗದು. ಪರೋಕ್ಷವಾಗಿ ಭಾಷೆಯ ಅಂತಸ್ಸತ್ವದ ಉಳಿವಿಗೆ ಅನ್ವಯಿಸುವುದರಿಂದ. ವ್ಯಾಕರಣ ವಿಷಯದ ಅಂಗವಾಗಿಯೂ ಇದನ್ನು ಪರಾಮರ್ಶಿಸಲು ಅವಕಾಶವಿದೆ. ಅಂತೆಯೇ ಈರ್ವರೂ ಇದನ್ನು ವ್ಯಾಕರಣಾಂಶ ವಿಷಯದೊಂದಿಗೆ ಮಿಲನಗೊಳಿಸಿ ಚರ್ಚಿಸಿದ್ದಾರೆಂದು ಹೇಳಬೇಕು.

ಇನ್ನು ಒಂದೇ ತೆರನಾದ ವಾಕ್ಯ ರಚನಾ ಸಂದರ್ಭ, ಒಂದೇ ವಿನ್ಯಾಸದ ಪದಗಳೆರಡರ ಕೂಡುವಿಕೆ, ನಿರ್ದಿಷ್ಟವಾದ ಒಂದೇ ಸ್ಥಾನವಾದ ಕಂದ ಪದ್ಯಾರ್ಧ—ಹೀಗೆ ಮೂರು ಸನ್ನಿವೇಶಗಳಲ್ಲಿ ಒಮ್ಮೆ ಸಂಧಿಯೂ ಮತ್ತೊಮ್ಮೆ ವಿಸಂಧಿಯೂ ಏರ್ಪಡುತ್ತವೆ. ಇವನ್ನೇ 'ವಿಕಲ್ಪ ಸಂಧಿ' (ಸೂತ್ರ–71) ಎನ್ನಲಾಗಿದೆ.

ಆದರೆ ಒಂದೇ ಸಂದರ್ಭದಲ್ಲಿ ಸಂಧಿಯೂ ವಿಸಂಧಿಯೂ ಆಗಬಹುದು ಎಂದಾಗ ಇದು ಯಾಕೆ ಮತ್ತು ಹೇಗೆ ಎಂಬ ಪ್ರಶ್ನೆ ಮೂಡುತ್ತದೆ. ಸಂಧಿ ಆಗಿದೆ ಎಂದರೆ ಏಕೆಂದು ಪ್ರಶ್ನಿಸುವ ಹಾಗಿಲ್ಲವಲ್ಲ! ಆದರೂ ಒಂದೇ ಸಂದರ್ಭದಲ್ಲಿಯ ಸಂಧಿ ಮತ್ತು ವಿಸಂಧಿಗಳೆರಡಕ್ಕೂ ಕೊಡುವ ಉದಾಹರಣೆಗಳನ್ನು ಮತ್ತೊಮ್ಮೆ ನಿರೀಕ್ಷಣೆಯ ಕಣ್ಣು ಹಾಯಿಸಿದರೆ ಕೆಲವು ಕಾರಣಗಳು ಸಿಕ್ಕಾವು ಎನಿಸುತ್ತದೆ.

3. 'ಇರ–ಅದೆ' ಜೊತೆಗೂಡುವಾಗಲೂ ಸಂಧಿವಿಕಲ್ಪಕ್ಕೆ

(i) ಬಗೆವೊಡ ಮಿನಿಸಿನಿ **ಸಿರ–ಅದೆ**

(ii) **ಇರದೆ** ಗರ್ಜಿಸಿ ಜೊಪ್ಪಲಂ ತಳರ್ದಂ ಜವಂ ತಳರ್ವಂದ ದಿಂ

ಮೊದಲನೆಯ ಉದಾಹರಣೆಯಲ್ಲಿ ವಿಸಂಧಿ ಮಾಡಿಕೊಳ್ಳಲಾಗಿದೆ. ಹಾಗಾದಾಗಲೇ ಇಲ್ಲಿ ನಾಲ್ಕು ಮಾತ್ರೆಯ ಮೂರು ಗಣಗಳುಳ್ಳ ಕಂದದ ಆದಿಪಾದ ರಚನೆ ಸಾಧ್ಯವಾಗಿದೆ. ಇನ್ನು 2ನೆಯದರಲ್ಲಿ ಸಂಧಿಯಾಗಿದೆ. ಏಕೆಂದರೆ ಇದರಿಂದ ತರಳ ವೃತ್ತದ 'ನ–ಭ–ರ–ಸ–ಜ–ಜ–ಗಂ' ಗಣಗಳು ಸರಾಗವಾಗಿ ರೂಪುಗೊಂಡಿರುವುದೇ ಆಗಿದೆ.

4. ಇದೇ ನಿಯಮ ಪದ್ಯಾರ್ಧ ಮತ್ತು ವೃತ್ತದ ಸಂದರ್ಭಗಳಿಗೂ ಅನ್ವಯಿಸುತ್ತದೆ. ಆದರೆ ಪದ್ಯಾರ್ಧವೆಂದರೆ ಕಂದದ ದ್ವಿತೀಯ ಪಾದದ ಅಂತ್ಯ ಮತ್ತು ತೃತೀಯ ಪಾದದ ಆದಿ ವರ್ಣಗಳಲ್ಲಿ ಮಾತ್ರ ವಿಸಂಧಿಗೆ ಅವಕಾಶವಿದೆ. ಹಾಗೆಂದ ಮಾತ್ರಕ್ಕೆ (ಛಂದೋ ನಿಯಮದ) ಗಣಗಳ ಪರಿಪಾಲನೆಗೆಂದು ಕಂದ ಪದ್ಯದ ಯಾವುದಾದರೂ ಪಾದವೊಂದರಲ್ಲಿ, ಸಂಧಿಯಾಗುವೆಡೆಗಳಲ್ಲೆಲ್ಲಾ ಬೇಕಾಬಿಟ್ಟಿಯಾಗಿ ವಿಸಂಧಿ ಮಾಡಿಕೊಳ್ಳುವುದನ್ನು ಕೇಶಿರಾಜ ಖಂಡತುಂಡವಾಗಿ ನಿಷೇಧ ಹೇರುತ್ತಾನೆ.[4]

---

(ii) ವಾಕ್ಯ ರಚನೆಗೆ ಸಂಬಂಧಿಸಿದಂತೆ ಪದಗಳ ಜೋಡಣೆ ಕ್ರಮದಲ್ಲಿ ಭಾಷೆಯ ಪ್ರಕೃತಿ ಮಾಧುರ್ಯವನ್ನೂ ಅರ್ಥ ಮರ್ಯಾದೆಯನ್ನು ಪರಿಗಣಿಸುವ ವಿವೇಕವನ್ನೂ ಎಚ್ಚರವನ್ನೂ ಹೊಂದಿರಬೇಕೆಂಬ ಕೇಶಿರಾಜನ [illegible] [illegible] ಅರ್ಥವಾಗುವಂಥದ್ದೇ ಆಗಿದೆ.

4. "ತಾಂ ಯಥೇಷ್ಟಮೆಂದಱಿವುಳ್ಳರ್ ಮಾರ್ಗದೊಳುಳ್ಳ ಸಂಧಿಯಂ ಕಿಡಿಪುದು ಪಾಗದು" (ಸೂ. 72)—ಎಂದು ಸ್ಪಷ್ಟವಾಗಿ ಹೇಳುತ್ತ ಈ [illegible] ಕೊಡುತ್ತಾನೆ.

ಈ ವಿಸಂಧಿಯನ್ನು ಕವಿ ತಾನಾಗೆ ನಿರ್ಮಿಸಿಕೊಂಡರೂ ಅದು ಅನಿವಾರ್ಯವೂ ಅತಿ ವಿರಳವೂ ಆಗಿರಬೇಕು. ಜೊತೆಗೆ ಪದ್ಯಾರ್ಧದಲ್ಲಿ ಮಾತ್ರ ಉಪಯೋಗ ಆಗುವಂತಿರಬೇಕು. ಇದು ಕೇಶಿರಾಜನ ಅಭೀಪ್ಸೆ ಎಂದು ತೋರುತ್ತದೆ.

5. ಋತ್ವದಲ್ಲಿ ವಿಸಂಧಿಗೆ :

ಸ ತ ತ ನ ಸ ರ ರ ಗ

(i) ಎಸೆಗುಂ ಋತು ಕ್ಷ್ಮಾಗತಂ ಕ ಕ್ಕೊಳಿಸುಗು ಮುಳವ ಟ್ಟಿರ್ದ ಋತು ಜ್ವಾಗತಂ....
(ಇದು ಮಹಾಸ್ರಗ್ಧರಾವೃತ್ತ)

(ii) ಸರಸಮ್ಯ ಜು ಋರ ನೆಂದಾ $4 \times 3 = 12$ ಮಾತ್ರೆಗಳು
(ಕಂದದ ಪ್ರಥಮ ಇಲ್ಲವೆ ತೃತೀಯ ಪಾದವಿದು)

ಇಲ್ಲಿಯ ಎರಡರಲ್ಲೂ ಪೂರ್ವ ಪದದ ಅಂತ್ಯ ವ್ಯಂಜನ 'ಮ್' ಆಗಿದೆ. ಪರ ಪದದ ಆದಿ ಸ್ವರ ಋತ್ವವಾಗಿದೆ. ಎಂದ ಮೇಲೆ ಒಂದರಲ್ಲಿ ಸಂಧಿ, ಇನ್ನೊಂದರಲ್ಲಿ ವಿಸಂಧಿ, ಹೀಗೆ ಸಂಧಿವಿಕಲ್ಪ ನಡೆದಿದೆ. ಬಹುಮಟ್ಟಿಗೆ ಪದಗಳ ಸಂಯೋಜನೆಯಲ್ಲಿ ಏರ್ಪಡಬಹುದಾದ ಸಹಜ ಸ್ಥಿತಿಯಲ್ಲಿ ಈ ಸಂಧಿ ವಿಕಲ್ಪ ಕಾಣದು. ಸಂಧಿ ವಿಕಲ್ಪದ ಸಂದರ್ಭದಲ್ಲಿ ಕಾಣಿಸುವ ವಿಸಂಧಿಯು ತಮ್ಮ ಛಂದಸ್ಸಿನ ನಿಯಮಾನುಸರಣೆಯಿಂದಾಗಿ ತಾವೇ ನಿರ್ಮಿಸಿಕೊಂಡ ವಿರಳೋಚ್ಚಾರಣೆಯೆ ಆಗಿರುತ್ತದೆ.

6. ವಿರಳವಾಗಿ ಈ 'ಸಂಧಿವಿಕಲ್ಪ' ಕ್ರಿಯೆಯು ಸಹಜವಾಗಿ ಕಾಣಿಸುವುದೂ ಉಂಟು. ಉದ್ಧೃತ ವಾಕ್ಯದ ಅಂತಿಮಾಕ್ಷರ ವಿಸರ್ಗದಿಂದ ಕೂಡಿದರೆ ಆಗಲೂ ಸಂಧಿ ಇಲ್ಲ. ಆ ವಾಕ್ಯದ ಅಂತಿಮ ವರ್ಣ ವ್ಯಂಜನವೇ ಆದರೆ. ಉದಾಹರಣೆಗೆ: 'ಎನ್' ಧಾತುವಿನ ಭೂತ ಕೃದಂತರೂಪ 'ಎಂದು' ಎಂಬುದರ ಆದಿ ಸ್ವರವಾಗುವುದರಿಂದ ಅಲ್ಲಿ ಸಂಧಿ ಏರ್ಪಡುವುದು. ಮತ್ತೆ ಕೆಲವೊಮ್ಮೆ 'ಎಂದು' ಎಂಬ ರೂಪ ಸಹಜವಾಗೆ 'ಧ್ವನಿಜಾರು'ವಿನಿಂದ 'ಯ'ದೊಂದಿಗೆ 'ಯೆಂದು' ಎನ್ನುವ ಹಾಗೆ ಉಚ್ಚರಿತವಾಗುವುದೂ ಉಂಟು.

ಉದಾ : 'ದಂಭೈರ್ವಿನಾ ಯಃ ಕ್ರಿಯತೇ ಸ ಧರ್ಮ'ಯೆಂದಂ ಭೋಜ ಗರ್ಭಂ

---

ಅಸಿಯ ಬಜಿ ಬೆಸೆದ ಪೆಟ್ಟಿಗೆ
ಮಿಸುಗುವ ಆರಂ ತೊಳಪ್ಪ ಕನ್ನವುರಂ ಚೆ
ಲ್ವೆಸೆದಿರೆ................ —ಕಾ. ಲೋ. ೪೪೦.

5. 'ಯ' ಕಾರಾಗಮ ಸಂಧಿಯಲ್ಲಿ ಈ 'ಧ್ವನಿಜಾರು' ಪ್ರಕ್ರಿಯೆಯಿಂದ ಅ. ಇ. ಎ— ಕಾರಾದಿ ಶಬ್ದಗಳು ಸಹಜವಾಗಿಯೇ 'ಯ' ಕಾರದೊಂದಿಗೆ 'ಯ', 'ಯಿ', 'ಯೆ' —ಎಂದಾಗುವುದು. ಈ ಬಗೆಗೆ ಇನ್ನಷ್ಟು ಮಾಹಿತಿಗಾಗಿ : ಕೆ. ಕೆ. ಗೌಡ. 'ಕನ್ನಡ ಭಾಷೆ ಮತ್ತು ವ್ಯಾಕರಣ ಒಂದು ಅಧ್ಯಯನ. 'ಯ' ಕಾರಾಗಮ ಸಂಧಿ ವಿಚಾರ ವಿವರಣೆ. ಪ್ರ. ಮು. 1986. ಪುಟ : 83.

7. ಅನುಕರಣ ಪದಗಳಲ್ಲಿ: ಇಲ್ಲಿ ಮುಖ್ಯವಾಗಿ ಒಂದಕ್ಕಿಂತ ಹೆಚ್ಚು ದೀರ್ಘ ಇಲ್ಲವೆ ಪ್ಲುತ ಸ್ವರಾಂತ ಅನುಕರಣ ಘಟಕಗಳು ಬಂದರೆ ಸಂಧಿ ಇಲ್ಲ. ಆದರೆ ವ್ಯಂಜನಾಂತವಾದ ಅನುಕರಣ ಶಬ್ದ ರೂಪವು ಬಂದರೆ ಸಂಧಿಯಾಗುವ ಸಂಭವವೇ ಹೆಚ್ಚು.

(i) ವಿಸಂಧಿಗೆ: **ಕು ಕೂ ಕೋ ಎಂದು**

(ii) ಸಂಧಿಗೆ: **ಛುಮ್ಮೆಂಬ ಛಟಚ್ಛಟೆಂಬ**[6]

8. ಸಂಧಿ ವಿಕಲ್ಪಕ್ಕೆ ಸಂಬಂಧಿಸಿದ ಹಾಗೆ ಈ ತನಕದ ಅವಲೋಕನದಲ್ಲಿ ವಿಸಂಧಿ ನಿರ್ಮಾಣಕ್ಕೆ ಮುಖ್ಯವಾಗಿ ಎರಡು ಕಾರಣಗಳು ಒದಗುತ್ತವೆ ಎನ್ನಬೇಕು—

(i) ಛಂದಸ್ಸೌಕರ್ಯಕ್ಕಾಗಿ—ಕವಿಕೃತವಾದುದು

(ii) ಆದಿ ಮತ್ತು ಪರ ವರ್ಣಗಳ ಸಂಯೋಜನೆಯ ವಿರಸದಿಂದಾಗಿ—ಸಹಜವಾದುದು.

ಹೀಗೆ ಸಹಜಕ್ಕಿಂತಲೂ ಹೆಚ್ಚಾಗಿ ಕವಿಕೃತವೆನಿಸುವ ಛಂದಸ್ಸಿನ ನಿಯಮ ಪಾಲನೆಗಾಗಿ ಈ 'ಸಂಧಿವಿಕಲ್ಪ' ಪ್ರಕ್ರಿಯೆ ಸೃಷ್ಟಿಗೊಳ್ಳುತ್ತದೆ—ಎಂಬುದು ಸಾಬೀತಾಗುತ್ತದೆ.

---

6. ವಾಕ್ಯ ವೇಷ್ಟನದಲ್ಲಿಯೂ ಸಂಧಿ ವಿಕಲ್ಪಕ್ಕೆ ಕನ್ನಡ ಕೈಪಿಡಿಯ ಉದಾಹರಣೆ.

## ಟೀಕೆ–ಟಿಪ್ಪಣಿ

'ಕರ್ನಾಟಕ ಲೋಚನ ಸಂಪುಟ–೪, ಸಂಚಿಕೆ–೨' ಕೈಗೆ ತಲುಪಿ ಓದಿದಾಗ ಕಂಡ ಸಂಗತಿಗಳಲ್ಲಿ ಒಂದೆರಡರ ಬಗ್ಗೆ ಟೀಕೆ ಟಿಪ್ಪಣಿಗಳನ್ನು ಬರೆಯಬೇಕೆನಿಸಿತು. ಶ್ರೀಸಾಮಾನ್ಯನಾದ ನನ್ನ ಅನಿಸಿಕೆಗಳನ್ನು ವಿದ್ವಾಂಸರು ಕಿಂಚಿತ್ ಪರಿಶೀಲಿಸಲಿ. ನೇರ ಕಂಡರೆ ಸ್ವೀಕರಿಸಲಿ.

### ೧. ಕುಂಭಿನೀ

ವಿದ್ವಾಂಸರಾದ ಯು. ಕೃಷ್ಣಶರ್ಮರು ಈ 'ಕುಂಭಿನಿ' ಪದದ ಒಂದು ಸುಂದರ ಪ್ರಯೋಗವನ್ನು ಗಮನಕ್ಕೆ ತಂದಿದ್ದಾರೆ :

ಕ್ಷಮಾಗುಣೇನ ಕುಂಭಿನೀ ಗತೇನ ಮತ್ತ ಕುಂಭಿನೀ
ದಯಾ ರಸೋಪಲಂಭಿನೀ ಸಮೀಹಿತಾರ್ಥಲಂಬಿನೀ
ತ್ರಿಷಾ ಜಪಾವಿಡಂಬಿನೀ ನತಾವನಾ ವಿಲಂಬಿನೀ
ಪುರದ್ವಿಷಃ ಕುಟುಂಬಿನೀ ಮಮಾಸ್ತು ಚಿತ್ತ ಚುಂಬಿನೀ ॥[1]

ಕನ್ನಡ ಭಾಷೆಯಲ್ಲಿ ಏನಿಲ್ಲವೆಂದರೂ ಕ್ರಿ.ಶ. 1044ರಷ್ಟು ಪ್ರಾಚೀನ ಶಾಸನವೊಂದರಲ್ಲಿ ಹೀಗೆ ಬಳಕೆಗೊಂಡಿದೆ :

ಕ್ಷಮೆಯೊಳ್ **ಕುಂಭಿನಿಯುಂ** ಗಭೀರತೆಯೊಳಂಭೋರಾಶಿಯುಂ....
..............................ಈತಂ ನೇರ್ಪಿ ಪೋಲ್ವಂ ॥[2]

'ಕುಂಭಿನೀ' ಸಂಸ್ಕೃತ ಮೂಲದ ಶಬ್ದವೆಂದು ಗುರುತಿಸಿದ್ದಾರೆ. ಸಂಸ್ಕೃತ ಕೋಶದಲ್ಲಿ ಇಲ್ಲವೆಂದಿದ್ದಾರೆ. ಪ್ರಾಯಃ ಅಪರ ಕಣ್ಣಿಂದ ಜಾರಿದೆ. ಏಕೆಂದರೆ ಈ ಶಬ್ದ ಪ್ರಸಿದ್ಧವಾದ ಅಮರಕೋಶದಲ್ಲಿಯೇ ಇದೆ :

---

1. ಡಾ. ಎಚ್. ಪಿ. ನಾಗರಾಜರಾವ್ "ಪ್ರಮಯಾಮೃತಂ" ಶುಭ್ಯಸ್ತಾದ : ೩೪ (ORI Mys : Pub. 1980)
2. ಕ. ಸಾ. ಪ. ಕನ್ನಡ ನಿಘಂಟು, ಎರಡನೆಯ ಸಂಪುಟ, ಪುಟ : ೧೮೯೩. ಇತರ ಪ್ರಯೋಗಗಳೂ ಇವೆ.

ಭೂರ್ಭೂಮಿರಚಲಾಽನಂತಾ ರಸಾ ವಿಶ್ವಂಭರಾ ಸ್ಥಿರಾ ।
ಧರಾ ಧರಿತ್ರೀ ಧರಣೀಃ ಕ್ಷೋಣೀರ್ಜ್ಯಾ ಕಾಶ್ಯಪೀ ಕ್ಷಿತಿಃ ॥೨॥

ಸರ್ವಂಸಹಾ ವಸುಮತೀ ವಸುಧೋಽರ್ವೀ ವಸುಂಧರಾ ।
ಗೋತ್ರಾ ಕುಃ ಪೃಥಿವೀ ಪೃಥ್ವೀ ಕ್ಷ್ಮಾಽವನೀ ಮೇದಿನೀ ಮಹೀ ॥೩॥

ವಿಪುಲಾ ಗಹ್ವರೀ ಧಾತ್ರೀ ಗೌರಿಲಾ ಕುಂಭಿನೀ ಕ್ಷಮಾ
ಜಗತೀ ರತ್ನಗರ್ಭಾ [ಚ] ಭೂತಧಾತ್ರ್ಯಬ್ಧಿಮೇಖಲಾ ॥೪॥[3]

'ಕುಂಭಿನೀ' ಇದು ಸಂಸ್ಕೃತ ಶಬ್ದ ; ಭೂಮಿಗೆ ಇರುವ 38 ಅಭಿಧಾನಗಳಲ್ಲಿ[4] ಒಂದು. ಕುಂಭಿನಿ <ಕುಂಭಿನೀ—ಅಲ್ಲಿ ಇಲ್ಲಿ ತಡಕಾಡುವ ಅವಶ್ಯಕತೆ ನನಗೆ ಕಂಡುಬರದು.

ಭೂಮಿ ಸ್ವತಂತ್ರವೇ ಅಥವಾ ಇಲ್ಲವೆ ಎಂಬುದು ನಮ್ಮ ಪುರಾತನರಿಗೆ ಗೊತ್ತಿತ್ತು.[5] ಪುರಾಣ ಕಲ್ಪನೆ ಅವರ ಮನಸಗಳನ್ನು ಆವರಿಸಿತ್ತು. ನಮ್ಮವರ ತಿಳಿವಳಿಕೆ ವಚನ ಸಾಹಿತ್ಯದಲ್ಲಿ ಹೀಗೆ ಅಭಿವ್ಯಕ್ತವಾಗಿದೆ :

(1) ಬಸವಣ್ಣನ ವಚನ : ಸಮುದ್ರ ಘನವೆಂಬೆನೆ ? ಧರೆಯ ಮೇಲಡಗಿತ್ತು. ಧರೆ ಘನವೆಂಬೆನೆ ? ನಾಗೇಂದ್ರನ ಫಣಾಮಣಿಯ ಮೇಲೆ ಅಡಗಿತ್ತು. ನಾಗೇಂದ್ರ ಘನವೆಂಬೆನೆ ? ಪಾರ್ವತಿಯ ಕಿರುಕುಣಿಯ ಮುದ್ರಿಕೆಯಾಯಿತ್ತು. ಅಂಥ ಪಾರ್ವತಿ ಘನವೆಂಬೆನೆ ? ಪರಮೇಶ್ವರನ ಅರ್ಧಾಂಗಿಯಾದಳು. ಅಂಥ ಪರಮೇಶ್ವರ ಘನವೆಂಬೆನೆ ? ನಮ್ಮ ಕೂಡಲ ಸಂಗನ ಶರಣರ ಮನದ ಕೊನೆಯ ಮೊನೆಯ ಮೇಲಡಗಿದನು.

(2) ಸರ್ಪನೂ, ಕೂರ್ಮನೂ. ದಿಕ್ಕರಿಗಳೆಂಟೂ ಭೂಮಿಯ ಹೊತ್ತಿರ್ದಹರೆಂದು ಅಹರ್ನಿಶ ಹೊತ್ತಿರ್ಪವರಿಗೆ ಅತ್ತಲಾಧಾರ. ಇತ್ತಲಾಧಾರ ಉತ್ತರ ಕೊಡುವವರಿಗೆ ಇಕ್ಕುವೆ ಮುಡಿಗೆಯ. ಎತ್ತುವರುಳ್ಳೊಡೆ ತೋರಿರೈ ರಾಮನಾಥಾ.

ಈ ಎರಡು ವಚನಗಳಲ್ಲಿ 'ಸರ್ಪ' (ಆದಿಶೇಷ) ಈ ಧರೆಯನ್ನು ಎಂದರೆ ಭೂಮಿಯನ್ನು ಹೊತ್ತಿರುವಂತೆ ತಿಳಿದುಬರುತ್ತದೆ. ಸರ್ಪಕ್ಕೆ 'ಕುಂಭೀನಸಃ' ಎಂದು ಹೇಳಲಾಗುತ್ತದೆ :

---

3. ಅಮರಕೋಶ (ಸಂ : ಬಿ. ಎಲ್. ರೈಸ್ X ಎನ್. ಬಾಲಸುಬ್ರಹ್ಮಣ್ಯ) ಪು. ೪೩ (ಮೈ. ವಿ. ವಿ. 1970) [ನಿರ್ಣಯ ಸಾಗರ ಪ್ರೆಸ್ ಪ್ರಕಟಿತ ಅಮರಕೋಶ, 1921—ಇದರಲ್ಲಿಯೂ ಭೂಮಿ ವರ್ಗದಲ್ಲಿ ಕುಂಭಿನೀ ಶಬ್ದವಿದೆ.—ಸಂ.]
4. ಭಟ್ಟ ಹಲಾಯುಧನ 'ಅಭಿಧಾನ ರತ್ನಮಾಲಾ' ಗ್ರಂಥದಲ್ಲಿ 38 ಅಭಿಧಾನಗಳಿದ್ದರೂ 'ಕುಂಭಿನೀ' ಎಂಬುದಿಲ್ಲ. ಪ್ರತಿಯೊಂದು ಕೋಶದಲ್ಲಿ ಎಲ್ಲವೂ ಇರುತ್ತವೆ ಎಂದೇನಿಲ್ಲ. ಪ್ರಯೋಗಗೊಂಡುದು ಮುಖ್ಯ.
5. ಆಧುನಿಕ ವಿಚಾರ ಜಗತ್ತಿಗೆ ಭೂಮಿ ಒಂದು ಗ್ರಹ (Planet) : ಆಕಾಶ ಕಾಯ.

(a) ಸರ್ಪಃ ಪೃದಾಕುರ್ಭುಜಗೋ ಭುಜಂಗೋऽಹಿರ್ಭುಜಂಗಮಃ

.................................................

ಲೇಲಿಹಾನೋ ದ್ವಿರಸನೋ ವ್ಯಾಳಃ ಕುಂಭೀನಸೋ ಪರಿಃ ॥6

(b) ಭುಜಗ ಭುಜಂಗಮ ಕುಂಭೀನಸ ಪನ್ನಗ ನಾಗ ಭೋಗಿನಃ ।7

ಕುಂಭೀನಸವು ಹೊತ್ತದ್ದು 'ಕುಂಭಿನೀ'. ಕನ್ನಡಕ್ಕೆ ಬಂದಾಗ್ಗೆ ಅದು ಸಹಜವಾಗಿಯೆ ಹ್ರಸ್ವ ಸ್ವರಾಂತ 'ಕುಂಭಿನಿ' ಎಂದಾಗುತ್ತದೆ.

## ೨. ಕನಕದಾಸರ ಮೂರು ಅಪ್ರಕಟಿತ ಕೀರ್ತನೆಗಳು

ಶ್ರೀ ಶ್ರೀಧರ ಎಚ್. ಜಿ. ಅವರು ಕನಕದಾಸರ ಮೂರು ಅಪ್ರಕಟಿತ ಕೀರ್ತನೆಗಳನ್ನು ಪ್ರಕಟಿಸಿ ಒಂದು ಒಳ್ಳೆಯ ಕೆಲಸವನ್ನು ಮಾಡಿದ್ದಾರೆ. ಅವರೇ ಹೇಳಿರುವಂತೆ ಇಂತಹ ಇನ್ನೂ ಅನೇಕ ಕೀರ್ತನೆಗಳು ಬೆಳಕಿಗೆ ಬರದೆ ಇರಬಹುದು. ವಿದ್ವಾಂಸರು ಹೀಗೆ ಪ್ರಕಟಿಸುವಾಗ ತಮಗೆ ದೊರೆತ ಆಕರದ ಬಗ್ಗೆ ಇನಿತು ಕಡ್ಡಾಯವಾಗಿ ಬರೆಯಬೇಕು. ದೊರೆತ ಕೀರ್ತನೆಗಳು ಓಲೆಯ ಪ್ರತಿಯುವೆ ? ಕಾಗದ ಪ್ರತಿಯುವೆ ? ಅಥವಾ ಅಧರಕ್ಕೆ ಬಂದ ಅಧರ ಸಂಗ್ರಹವೇ (ತೋಂಡೀಸಂಗ್ರಹ) ? ಅಧರ ಪರಂಪರೆಯುದಾಗಿದ್ದರೆ ಆ ಹಾಡನ್ನು ಹಾಡಿದವರ ಬಗ್ಗೆ ಇನಿತು ವಿವರಗಳು ಬೇಕಿತ್ತು. ಪರಿಶೀಲಿಸಬೇಕೆನ್ನುವವರಿಗೆ ಆ ಮೂಲಸಾಮಗ್ರಿಯು ಎಲ್ಲಿ ದೊರೆಯುತ್ತದೆ ಎಂಬುದರ ಬಗ್ಗೆ ಮಾಹಿತಿ ತಿಳಿಯುದಿದ್ದರೆ ಹೇಗೆ ? ಶ್ರೀ ಶ್ರೀಧರ ಅವರನ್ನೇ ಕೇಳಲು ಅವರಿದ್ದಲ್ಲಿಗೆ ಹೋಗಬೇಕೆ ? ಶಿವಮೊಗ್ಗ ಜಿಲ್ಲೆಯಲ್ಲಿರುವ ಸಾಗರ ತಾಲೂಕಿನ ಆಸುಪಾಸಿನಲ್ಲಿ ದೊರೆತಿದ್ದರೆ (ಶ್ರೀ ಶ್ರೀಧರ ಎಚ್. ಜಿ. ಅವರ ಊರು ಸಾಗರ ತಾಲೂಕಿನಲ್ಲಿದೆ) ಜಿಜ್ಞಾಸುಗಳು ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರಿನಲ್ಲಿರುವ ಶ್ರೀ ಶ್ರೀಧರ ಅವರ ಹತ್ತಿರ ಹೋಗುವುದು ವಿನಾಕಾರಣ ಖರ್ಚಲ್ಲವೆ ? ಖರ್ಚಿನ ಸಂಗತಿ ಏನೇ ಇರಲಿ, ವಿದ್ವಾಂಸರು ತಾವು ಪ್ರಕಟಿಸುವ ಅಪ್ರಕಟಿತ ಕೃತಿಯ ಇತಿಹಾಸವನ್ನು ಕನಿಷ್ಠ ಒಂದು ಪರಿಚ್ಛೇದವನ್ನು ಬರೆದು ಅದರಲ್ಲಿ ತಿಳಿಸಬೇಕು : ಹೆಚ್ಚಿಗೆ ಬರೆದರೆ ನಮ್ಮದೇನೂ ಅಭ್ಯಂತರವಿಲ್ಲ. ಹಾಗೆ ಬರೆಯದಿದ್ದರೆ ವಿದ್ವತ್ತಿಗೆ, ಸರಸ್ವತಿಗೆ, ದ್ರೋಹ ಬಗೆದಂತೆ. ನಮಗೆ–ತಮ್ಮ ತಲೆಮಾರಿಗೆ—ಕೊಟ್ಟಿರುವ–ಪರಂಪರಾಗತ ಸಂಸ್ಕೃತಿಯನ್ನು ಉಳಿಸಿಕೊಟ್ಟವರಿಗೆ ಬೆಲೆಯೇನು ? ಇಂತಹ ಲೇಖನಗಳು ಸಂಚಿಕೆಗೆ

---

6. ಪೂರ್ವೋಕ್ತ ಅಮರಕೋಶ 'ಭೋಗಿವರ್ಗ' ಶ್ಲೋಕಗಳು ೨೪೭–೫೦. ಪು. ೩೫.

7. ಪೂರ್ವೋಕ್ತ 'ಅಭಿಧಾನ ರತ್ನಮಾಲಾ' ಪು. 105.

ಕೂಡ ಅನರ್ಹ. ವೈಜ್ಞಾನಿಕವಲ್ಲದುದರಿಂದ ಇಂತಹ ಬರಹಗಳನ್ನು ನಂಬುವುದೆಂತು ?

ಒಂದು ಉದಾಹರಣೆಯಿಂದ ಇದನ್ನು ವಿವರಿಸಬಹುದು—ಕನಕದಾಸರು ಬೇಡ ಜನಾಂಗ, ಕಬ್ಬಲಿಗ (ಬೆಸ್ತ) ಜನಾಂಗ. ಕುರುಬ ಜನಾಂಗ ಹಾಗೂ 'ಹಂಡೆಕುರುಬ' ಎಂಬೆಲ್ಲ ಜನಾಂಗಗಳಿಗೆ ಸೇರಿದವರು ಎಂದು ಸದ್ಯ ವಾದವಿವಾದಗಳಿವೆ. ಇಲ್ಲಿನ ಮೂರು ಕೀರ್ತನೆಗಳಲ್ಲಿ ಒಂದು ಹೀಗಿದೆ :

ನಿನ್ನ ನಾಮ ವಾಲ್ಮೀಕಿಯ ಕುಲವನುದ್ಧರಿಸಿದೆ
ನಿನ್ನ ನಾಮ ಘಂಟಾಕರಣನ ಸಲಹಿದೆ
ದೇವ ನಿನ್ನ ನಾಮ ॥

ಇಲ್ಲಿನ 'ವಾಲ್ಮೀಕಿಯ ಕುಲ' ಎಂದರೆ ಯಾವುದು ? ನಮಗೆ ತಿಳಿದಂತೆ 'ವಾಲ್ಮೀಕಿಕುಲ' ಎಂದರೆ ವ್ಯಾಧರ> ಬೇಡರ ಕುಲ. ಕನಕದಾಸರಿಗೆ ಬೇಡಕುಲದ ಮೇಲೆ ಪ್ರೇಮ ಇದ್ದಿರಬೇಕೆಂದು ಈ ಮಾತಿನಿಂದ ಸ್ಪಷ್ಟವಾಗುತ್ತದೆ. ಎಚ್. ಜಿ. ಶ್ರೀಧರ ಅವರಿಗೆ ದೊರೆತ ಆಕರ ಎಷ್ಟು ಪುರಾತನ–ಏನು–ಎತ್ತ ತಿಳಿದ ವಿನಾ ಸದ್ಯ ಏನನ್ನೂ ಬರೆಯುವಂತಿಲ್ಲ. ವಿದ್ವಾಂಸರಾದ ಶ್ರೀಧರರು ಒಂದು ಟಿಪ್ಪಣಿಯನ್ನು 'ಕಲೋ'ದಲ್ಲಿ ಬರೆಯಬೇಕೆಂದು ಬಿನ್ನಹ. ಇಂತಹದೇ ಇನ್ನೊಂದು ಲೇಖನ "ಶೀಲಾಂಕನ ಚಉಪ್ಪನ್ನ ಮಹಾಪುರಿಸ ಚರಿಯಂ" ಎಂಬುದು. ಈ ಪ್ರಾಕೃತ ಪುಸ್ತಕವನ್ನು ಯಾರು ಸಂಪಾದಿಸಿದ್ದಾರೆ. ಎಲ್ಲಿಂದ ಪ್ರಕಟಗೊಂಡಿದೆ ಇತ್ಯಾದಿ ಒಂದೂ ವಿವರಗಳಿಲ್ಲ. ಈ ಗ್ರಂಥವು 'Prākrit Test Society. Varanasi' ಸಂಸ್ಥೆಯಿಂದ ಪ್ರಕಟಗೊಂಡಿದೆ. ಅಮೃತಲಾಲ್ ಮೋಹನಲಾಲ್ ಭೋಜಕ ಅವರು ಇದರ ಕರ್ತೃ : ಕ್ಲಾಸ್ ಬ್ರೂನ್ (KLAUS BRUHN) ಅವರು ಇದಕ್ಕೆ ಉಪೋದ್ಘಾತವನ್ನು ಬರೆದಿದ್ದಾರೆ. ವಾಸ್ತವದಲ್ಲಿ ಈ ಲೇಖನ ಪೂಜ್ಯ ಶಾಸ್ತ್ರಿಗಳ "ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ" ಎಂಬ ಗ್ರಂಥದಿಂದ ಸಂಗ್ರಹಿಸಿಕೊಟ್ಟುದು.[8] ಕಿಂಚಿತ್ ಸಂಸ್ಕರಣಗೊಂಡಿದೆ ಎಂಬುದೂ ಸತ್ಯ ಸಂಗತಿ! ಆ ಗ್ರಂಥದ ಬಗ್ಗೆ ಯಾದರೂ ಉಚಿತ ಸೂಚನೆಯನ್ನು ನೀಡಬೇಕಿತ್ತು.

ತ್ರಿಷಷ್ಟಿ ಮಹಾಪುರುಷ ಅಥವಾ ತ್ರಿಷಷ್ಟಿ ಶಲಾಕಾ ಪುರುಷರ ಜೀವನ ಚರಿತ್ರೆಯನ್ನು ಕುರಿತು ಭಾಗಶಃ ಕಲ್ಪಸೂತ್ರ, ತಿಲೋಯಪಣ್ಣತ್ತಿ, ವಿಶೇಷಾವಶ್ಯಕ ಭಾಷ್ಯ ಹಾಗೂ ಸಮವಾಯಾಂಗ ಸೂತ್ರ ಇತ್ಯಾದಿ ಗ್ರಂಥಗಳಲ್ಲಿಯೂ ಇದರ ವಿವರಣೆ

8. ಡಾ. [illegible] "ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ" ಪು. ೪೦-೪೨ (ಪ್ರಸಾರಾಂಗ, ಮೈ. ವಿ. ವಿ. 1973) ಇತ್ಯಾದಿ.

ಗಳನ್ನು ಕಾಣಬಹುದು.[9] ಇದುವರೆಗೆ ಅಧ್ಯಯನ ವಿನಾಗಿದೆಯೊ ಇದಕ್ಕೆ ಇವಷ್ಟನ್ನೂ ಸೇರಿಸಿಕೊಳ್ಳಬೇಕು.

## ೩. ಅಪ್ರಕಟಿತ ನಾಲ್ಕು ವೃತ್ತಗಳು

ಶ್ರೀ ಎಸ್. ಶಿವಣ್ಣ ಅವರು 'ಜಂಗಮ ಗ್ರಂಥಸೂಚೀ' ಎಂಬ ಅಭಿಧಾನಕ್ಕೆ ಪಾತ್ರರು. ಶ್ರೀಯುತರು 'ಪಂಪಾ ಶತಕ' ಕಾವ್ಯದ ಒಂದು ಓಲೆಯ ಪ್ರತಿಯಲ್ಲಿ ಲಭ್ಯವಾದುವನ್ನು ಪ್ರಕಟಿಸಿ ಇವು ಪ್ರಾಯಃ ಹರಿಹರದೇವನ ಅಲಭ್ಯ ಶತಕ, ಅಷ್ಟಕ ಬಗೆಯ ಗ್ರಂಥವೊಂದಕ್ಕೆ ಸಂಬಂಧಪಟ್ಟಿರಬಹುದು ಎಂದು ಊಹಿಸಿದ್ದಾರೆ.[10] ಈ ನಾಲ್ಕು ಪದ್ಯಗಳಲ್ಲಿ ಎರಡಂತು ಹರಿಹರನವಲ್ಲ. ಏಕೆಂದರೆ, ಇವುಗಳಲ್ಲಿ ಅತ್ಯಂತ ಅಪ ಪ್ರಯೋಗಗಳು ಬಳಕೆಗೊಂಡಿವೆ. ಆ ಪದ್ಯಗಳೆಂದರೆ :

ಗುಣಸಿಧಿ ಗೂಢರೂಪ ಪರಬೊಮ್ಮ ನಿರಾಳದಸಾರಪೂರ ಭ
ಕ್ತನಿಕರ ಹಾಲಹಾಲ ವಿಷಭಕ್ಷ ವನೇಜ ದಿನೇಶ ಈಶ ಶೈ
ಕ್ಷಣ ಗಿರಿಜಾಂಗಲಿಂಗ ಕಮಲಾಕ್ಷ ವಿರಿಂಚಿ ಬಿಡೌಜ ವಂದ್ಯ
ಕ್ಷಣ ಪಶುಪಾಶಮುಕ್ತ ಪರಮೇಶ ಸದಾಶಿವ ಹಂಪೆಯಾಳ್ದನೇ ॥

ಎಲೆಲೆಲೆ ಸಾರಿದೊನೆಲೆಲೆ ಸಾರಿದೆನಕ್ಕಟ ಸಾರಿದೆಂ ವೃಥಾ
ಜಲಿಸದಿರಿನ್ನು ಪುಟ್ಟುವದಪೂರ್ವಪೂರ್ವವಪೂರ್ವ ವಾರ್ಧಿಯು
ನಲಿನಲಿದುಬ್ಬಿ ಬೊಬ್ಬಿಡುತ ಕೊಚ್ಚುತ ಕೂಗುವ ಹಾಡುತಾಡುತ
ಗ್ಗಲಿಸುತ ತೂಗಿಬಾಗುತೊಸೆದರ್ಚಿಸು ಮಾನವ ಹಂಪೆಯಾಳ್ದನೇ ॥

**'ಹಾಲಹಾಲವಿಷ'** ಎಂಬುದು ಸರಿಯಲ್ಲ 'ಹಲಾಹಲ' ಎಂದಿರಬೇಕು. ................ಕಾಕೋಲ ಕಾಲಕೂಟ ಹಲಾಹಲಃ। ಸೌರಾಷ್ಟ್ರಿಕ ಶೌಕ್ಲಿ ಕೇಯೋ ಬ್ರಹ್ಮಪುತ್ರಃ ಪ್ರದೀಪನಃ। ದಾರದೋವತ್ಸನಾಭಶ್ಚ ವಿಷಭೇದಾ ಅಮೀ ನವ ॥ ಎಂದಿದೆ. ಹರಿಹರ "ಗಿರಿಜಾಂಗಾಲಿಂಗ" ಎಂದು ಹೇಳುವುದು ರೂಢಿಯೆ ವಿನಾ 'ಗಿರಿಜಾಂಗಲಿಂಗ' ಎಂದು ಹೇಳಿದುದಕ್ಕೆ ಬೇರೆಡೆ ಪ್ರಯೋಗಗಳಿಲ್ಲ. 'ಎಲೆಲೆಲೆ' ಎಂಬುದು ಸರಿಯಾದ ಪ್ರಯೋಗವಲ್ಲ. ಒಂದು 'ಲೇ' ಹೆಚ್ಚಾಗುತ್ತದೆ ; ಛಂದಸ್ಸಿಗಾಗಿ ಬಂದಿದೆಯೆಂದು ಹೇಳಬಹುದಾದರೂ ಹರಿಹರ ಕವಿ ಮಹಾನ್ ಛಂದೋವಿದ. ಛಂದಗಳು ಅವನ ನಾಲಗೆಯ ಮೇಲೆ ನರ್ತಿಸುವುದನ್ನು ಬೇರೆಡೆ ಕಾಣಬಹುದು.

———

9. Dr. A. N. Upadhye "Upadhye : Papers" p. 29

10. ಕಲೋ, ಸಂಪುಟ-೩ ; ಸಂಚಿಕೆ-೨ ; ಪು. 14 ([illegible])

**'ಸಾರಿದೆಂನೆಲೆ'** > ಸಾರಿದೆನ್ನೆಲೆ—ಇದು ಕೂಡ ಅಪಪ್ರಯೋಗ. ಸಾರಿದೆನ್ + ಎಲೆ —ಎಂದೇ ಇರಬೇಕು. 'ಸಾರಿದೆನಕ್ಕಟ' ಎಂಬುದನ್ನು ಗಮನಿಸಿ. 'ವಾರ್ಧಿಯು' ಎಂಬುದು ಭಗಣವಾಗುತ್ತದೆ; ಆದರೆ ಚಂಪಕಮಾಲಾ ವೃತ್ತದಲ್ಲಿ ಕೊನೆಯಗಣ 'ರಗಣ' ಆಗಿರಬೇಕು. ಪಂಕ್ತಿಯ ಕೊನೆಯ ಲಘುವನ್ನು ಗುರುವೆಂದು ಸ್ವೀಕರಿಸ ಬಹುದಾದರೂ ಹರಿಹರನ ಪದ್ಧತಿಯಲ್ಲಿ ಇಂತಹ ನ್ಯೂನಭಗಣಗಳು ಅಪರೂಪ. ಅವರಲ್ಲೂ ವೃತ್ತ ಬಂಧಗಳಲ್ಲಿ ಲಯಕ್ಕೆ ಅಡ್ಡಿಯಾಗುವಲ್ಲಿ ಇಂತಹ ಪ್ರಯೋಗ ಕಾಣಬರದು. 'ಹಂಪೆಯಾಳ್ದನೇ' ಎಂಬುದಕ್ಕೆ ಪ್ರತಿ 'ಹಂಪೆಯಾಳ್ದನಂ' ಎಂದಿರ ಬೇಕು. ಪಂಪಾ ಶತಕದ ತುಂಬ 'ಹಂಪೆಯಾಳ್ದನಂ' ಎಂಬುದು ರಾರಾಜಿಸಿದೆ. ಒಂದು ಪದ್ಯ ನೋಡಿ :

> ಜಗದೊಳಗೆಲ್ಲ ನೋಡುವಡೆ ಸತ್ಯಮೆ ಶೀಲಮೆ ತೋರ್ಕುತಿರ್ಪುದೈ
> ಬಗೆವೊಡೆ ಭಕ್ತನೊರ್ವನದರೊಳ್ ನೆರೆ ಸತ್ಯಮನಾವಲಂಬಿಸನೇ
> ಪಗೆಯೆನಿಸಿರ್ಪುದೇಕೆಲ ? ಅಸತ್ಯಮೆ ತಾಂ ಹಿರಿದಾಗೆ–ಅಂತದಂ
> ಬಗೆಯದೆ ಸತ್ಯಮಂ ನುಡಿಯುತರ್ಚಿಸುತಿರ್ಪುದು ಹಂಪೆಯಾಳ್ದನಂ ॥

'ಹಂಪೆಯಾಳ್ದನೇ' ಎಂಬ ಸಂಬೋಧನೆ ಬರಬಾರದು.

ಸೀತಾರಾಮ ಜಾಗೀರ್‌ದಾರ್

# ಪಂಪಭಾರತ–ಮೊದಲ ಆಶ್ವಾಸ–ಪದ್ಯ–77
## ಒಂದು ಪ್ರತಿಕ್ರಿಯೆ

**ಕೆ. ವಿ. ಶ್ರೀನಿವಾಸಮೂರ್ತಿ**

ಕೆ. ಎಸ್. ಮಧುಸೂದನ ಅವರು ಪಂಪಭಾರತದಲ್ಲಿ, ಮೇಲೆ ಸೂಚಿಸಿರುವ ಪದ್ಯದ ಪಾಠನಿರ್ಣಯ ಅನ್ವಯಕ್ರಮ ಹಾಗೂ ಅರ್ಥನಿಷ್ಕರ್ಷೆಯನ್ನು ಕಳೆದ ಸಾಧನೆಯ ಸಂಚಿಕೆಯಲ್ಲಿ ಚರ್ಚೆಮಾಡಿದ್ದಾರೆ. ಈ ಬಗ್ಗೆ ಪ್ರತಿಕ್ರಿಯೆ ಸೂಚಿಸುವುದು ಈ ಲೇಖನದ ಉದ್ದೇಶ.

ಬೆಳ್ಳಾವೆ, ಡಿ.ಎಲ್.ಎನ್., ಎನ್. ಅನಂತರಂಗಾಚಾರ್ ಮತ್ತು ಆರ್. ಎಲ್. ಅನಂತರಾಮಯ್ಯ ಇವರುಗಳು ಮೇಲಿನ ಪದ್ಯವನ್ನು ಹೇಗೆ ಅರ್ಥೈಸಿದ್ದಾರೆಂಬುದನ್ನು ಸೂಚಿಸಿದ್ದಾರೆ. ನಿಘಂಟಿನ ಆಧಾರದಿಂದ 'ಅಂಬೆ' ಶಬ್ದಕ್ಕೆ, ಬೆಳ್ಳಾವೆಯವರು 'ಮಗಳು' ಎಂದು ಅರ್ಥೈಸಿರುವುದು ಸರಿಯಲ್ಲ ಎಂದಿದ್ದಾರೆ. ಈ ಅಭಿಪ್ರಾಯವನ್ನು ಒಪ್ಪಲು ಅಡ್ಡಿಯಿಲ್ಲ.

ಡಿ.ಎಲ್.ಎನ್. ಅವರು 'ಅಂಬೆ' ಶಬ್ದಕ್ಕೆ ಕೊಡುವ ಅರ್ಥ ಸೊಗಸಾಗಿದೆ ಎಂದು ಒಪ್ಪಿಕೊಂಡಿರುವ ಶ್ರೀಯುತರು, ಅದೇ ಪದ್ಯದಲ್ಲಿ ಬರುವ 'ಅಂಬೆಯೊಳ್' ಎಂಬುವಕ್ಕೆ 'ಅಂಬೆಯಲ್ಲಿ' ಎಂದು ಅನ್ವಯಾರ್ಥವನ್ನು ಹೇಳಿರುವುದರಿಂದ ವ್ಯಾಕರಣ ದೋಷ ಉಂಟಾಗುವುದೆಂದು ತೋರಿಸಿಕೊಟ್ಟು, ಅನ್ವಯಕ್ರಮ ಸಮರ್ಪಕವಾಗುವುದಿಲ್ಲ ಎಂದಿದ್ದಾರೆ. ಇದು ನಿಜಸಂಗತಿಯೇ. ಆದರೆ 'ಅಂಬೆ' ಶಬ್ದವನ್ನು ಕುರಿತು ವಿಚಾರಮಾಡುವಾಗ ಅಂಬು + ಎ = ಅಂಬೆ ಆಗುವುದಿಲ್ಲ ಎಂದಿರುವುದು ಸೋಜಿಗದ ಸಂಗತಿ. ಊರು + ಎ = ಊರೆ. ಪಾಲ್ + ಎ = ಪಾಲೆ. ನೀರು + ಎ = ನೀರೆ ಆಗುವುದಿಲ್ಲವೆ ? ಅಂಬು + ಎ = ಅಂಬೆ. ಏಕಾಗದು ? ಎಂಬುದನ್ನು ಹೇಳಿಲ್ಲದಿರುವುದು ಗಮನಾರ್ಹ ಸಂಗತಿ.

ಡಿ.ಎಲ್.ಎನ್. ಅವರು ಸಂಪಾದಿಸಿರುವ 'ಶಬ್ದಮಣಿ ದರ್ಪಣ'ದ. 18ನೆಯ ಸೂತ್ರದ ವೃತ್ತಿಯನ್ನು ಗಮನಿಸಿ: "ಏ ಐ. ಓ ಔ ಎಂಬೀ ಯುಗಳಾಕ್ಷರಂಗಳುಂ ವಿಶಂಕಾವಧಾರಣ ನಿಪಾತಂಗಳಲ್ಲದೆ ನಿಜದಿನೊಳವು..." ಎಂದಿದೆ. ಈ ವಿವರಣೆಯಿಂದ ಸ್ಪಷ್ಟವಾದ ಸಂಗತಿಯೆಂದರೆ–ಈ ಮೇಲೆ ಸೂಚಿಸಿದ ಸ್ವರಗಳು ವಿಶಂಕೆ.

ಅವಧಾರಣೆ ಮತ್ತು ನಿಪಾತಾವ್ಯಯಗಳಲ್ಲಿ ಬಳಕೆಯಾಗುತ್ತವೆ ಎಂಬುದು. ಶಬ್ದಮಣಿ ದರ್ಪಣದ 66ನೆಯ ಸೂತ್ರಸಹ ಈ ಮೇಲಿನ ಸಂಗತಿಯನ್ನೇ ಸೂಚಿಸುತ್ತಿದೆ. ಆದುದ ರಿಂದ ಡಿ.ಎಲ್.ಎನ್. ಅವರು 'ಅಂಬೆ' ಎಂಬುದನ್ನು ಅಂಬು + ಎ ಎಂದು ಅವಧಾರ ಣಾರ್ಥದಲ್ಲಿ ಬಳಸಿರುವುದು ಸರಿಯಾಗಿಯೇ ಇದೆ.

ಡಿ.ಎಲ್.ಎನ್. ಅವರ ಅನ್ವಯದ ಬಗೆಗೆ ಹೇಳುತ್ತಾ "ಎನ್ನಂ ಕರಂ ನಂಬಿದ ಅಂಬೆಯೊಳ್ ಎನ್ನ ಅಂಬೆ[ವ]ಲಂ ವಿವಾಹ ವಿಧಿಯಂ ಮಾಟಿಪ್ಪಂ" ಎಂಬಲ್ಲಿ ವ್ಯಾಕರಣ ಬದ್ಧವಾಗಿ ಸರಿಯಾದ ವಾಕ್ಯವಾಗುವುದಿಲ್ಲ ಎಂದಿದ್ದಾರೆ. 'ಅಂಬೆಯೊಳ್' ಎಂಬುದಕ್ಕೆ 'ಅಂಬೆಯಲ್ಲಿ' ಎಂದು ಅರ್ಥೈಸಿದರೆ ಸರಿಯಾಗುವುದಿಲ್ಲ ಎಂದಿರುವುದು ಸಮಂಜಸ ವಾಗಿದೆ. ಆದರೆ ಸಪ್ತಮಿಗೆ ಚತುರ್ಥಿಯ ಸ್ಥಾನಪಲ್ಲಟವುಂಟು (ಸೂತ್ರ 147). ಆದ್ದರಿಂದ 'ಅಂಬೆಯೊಳ್' ಎನ್ನುವಾಗ 'ಅಂಬೆಯಲ್ಲಿ' ಎನ್ನುವುದರ ಬದಲು 'ಅಂಬೆಗೆ' ಎನ್ನಬಹುದಲ್ಲವೆ? ಅಥವಾ 'ಅಂಬೆಯ ವಿಷಯದಲ್ಲಿ' ಎಂದು ಅನ್ವಯಮಾಡ ಲಾಗದೆ? ಆಗ "ನನ್ನನ್ನು ಅತಿಶಯವಾಗಿ ನಂಬಿದ ಅಂಬೆಗೆ ಅಥವಾ ಅಂಬೆಯ ವಿಷಯದಲ್ಲಿ–ಎಂದು ವ್ಯಾಕರಣ ದೋಷವಿಲ್ಲದೆ ಅನ್ವಯವಾಗುತ್ತದೆ. ಆದ್ದರಿಂದ 'ಎನ್ನಂಬೆ[ವ]ಲಂ' ಎಂಬ ಪಾಠಕ್ಕೆ ಕ್ಲೇಶವುಂಟಾಗುವುದಿಲ್ಲ.

ಶ್ರೀಯುತರು ಈ ಪದ್ಯದ ಪಾಠನಿರ್ಣಯ ಮಾಡಲು ಪ್ರಯತ್ನಿಸಿರುವುದೇ ಕೆಂಬುದು ಸ್ಪಷ್ಟ. ಮೊದಲನೆಯದು 'ಅಂಬೆ' ಎಂಬುದಕ್ಕೆ ಬೆಳ್ಳಾವೆಯವರು 'ಮಗಳು' ಎಂದು ಅರ್ಥೈಸಿದ್ದು. (ಹಾಗೆ ನೋಡಿದರೆ ಬೆಳ್ಳಾವೆಯವರು ಕೊಟ್ಟಿರುವ ಅರ್ಥ ಶ್ರೀಯುತರು ಕೊಡುವ ಅರ್ಥಕ್ಕಿಂತಲೂ ಹೆಚ್ಚು ಸಂವೇದನಶೀಲವಾಗಿದೆ!) ಮತ್ತು ಡಿ.ಎಲ್.ಎನ್. 'ಅಂಬೆಯಲ್ಲಿ' ಎಂದು ಅನ್ವಯಾರ್ಥ ಹೇಳಿದ್ದು–ಇವೆರಡೇ. ಮೂರನೆಯದು 'ಘ' ಪ್ರತಿ ಪ್ರಾಚೀನವಾಗಿದ್ದು ಆ ಪ್ರತಿಯ ಪಾಠ 'ಪೊ' ಎಂಬುದು. ಅದೇ [ವ] ಎಂಬ ಊಹಾಪಾಠಕ್ಕೆ ಬದಲು ಇರಬೇಕಾದ್ದು ಸೂಕ್ತ ಎಂಬ ತೀರ್ಮಾನ. ಪೊ[ಲಂ] ಎಂದು ಪಾಠನಿರ್ಣಯವಾಗಬೇಕು, ಪಿ.ಸಿ.ಯವರ ಅಭಿಪ್ರಾಯವೂ ಇದೇ ಆಗಿತ್ತು ಎಂದು ಸೂಚಿಸಿದ್ದಾರೆ.

ಈಗ ವಿಚಾರಿಸಬೇಕಾದ್ದು. ಪಾಠ ಪರಿಷ್ಕರಣ ಮಾಡಬೇಕಾದ್ದು ಯಾವಾಗ? ಎಂಬುದು. ಅನ್ವಯದಲ್ಲಿ ತೊಡಕುಬಂದಾಗ. ವ್ಯಾಕರಣನಿಯಮ ಅಡ್ಡಿಯಾದಾಗ– ಹೀಗೆಲ್ಲ ಉದ್ದಕ್ಕೂ ಪಟ್ಟಿಮಾಡಬಹುದು. ಇಲ್ಲಿ ಅವರ ಚರ್ಚೆ ಪ್ರಸ್ತುತವಲ್ಲ. ಬೆಳ್ಳಾವೆ ಯವರು 'ಘ' ಪ್ರತಿಯ ಪಾಠವನ್ನು ಎಷ್ಟೋ ಕಡೆ ಬಳಸಿಕೊಂಡಿರುವಂತೆ, ಬಳಸಿ ಕೊಳ್ಳದಿರುವುದೂ ಉಂಟು. ಇದಕ್ಕೆ ಸಮರ್ಥನೀಯವಾದ ಪ್ರಬಲ ಕಾರಣಗಳಿರ ಬೇಕಾದ್ದು ಅತ್ಯಗತ್ಯ. [ವ]ಲಂ ಎಂಬುದೇ ಅಕ್ಷರಸ್ಸಾಮ್ಯತ್ವದ ಕಾರಣದಿಂದ 'ಪೊ' ಆಗಲು ಸಾಧ್ಯ.

ಇದೀ ಪದ್ಯವನ್ನು ಅಧ್ಯಯನ ಮಾಡಿದರೆ, ಪರಶುರಾಮನ ದೃಢನಿರ್ಧಾರದ ಗತ್ತು ಮತ್ತು ವಿಚಾರ ಎರಡೂ ಮನವರಿಕೆಯಾಗುತ್ತದೆ. "ವಿಚಾರಮಾಡಿದರೆ ಭೀಷ್ಮನಿಗೆ ಬೇರೆ ಕಾರ್ಯವಿಲ್ಲ" ಎಂಬ ಮಾತಿನಿಂದಲೇ ಅದು ಸೂಚಿತವಾಗುತ್ತದೆ.

ಎರಡನೆಯದಾಗಿ ಭೀಷ್ಮರ ಗುರು ಪರಶುರಾಮ, ಅಂಬೆಯನ್ನು ಮಗಳಂತೆ ಪರಿಭಾವಿಸುವುದು ಸಂಭಾವ್ಯವೇ ಹೊರತು ತಾಯಿಯಂತಲ್ಲ. ಬ್ರಹ್ಮಚರ್ಯದಲ್ಲಿದ್ದ ಪರಶುರಾಮನ ಅಂತರ್ಯದಲ್ಲಿ ತಾಯಿಯೆಂಬ ಭಾವವಿದ್ದಿರಬಹುದು. ಆಗ ಅಂಬೆ ಪರಶುರಾಮನಿಗೆ ಪೂಜ್ಯಳಾಗಬೇಕಾಗುತ್ತದೆ. ಮಗಳಾದರೆ ಪ್ರೀತಿಸುವ ವಸ್ತುವಾಗುತ್ತಾಳೆ. ಅಂಬೆ ಅಸಹಾಯಕಳಾಗಿ ಬಂದು ಕಿಚ್ಚನ್ನು ದಯೆಪಾಲಿಸುವಂತೆ ಬೇಡಿಕೊಳ್ಳುತ್ತಿರುವುದು ಗಮನಾರ್ಹ ಸಂಗತಿ. ಭೀಷ್ಮನೊಂದಿಗೆ ವಿವಾಹಮಾಡಿಸುವುದು ಇಲ್ಲವೇ ಅಂಬೆಗೆ ಕಿಚ್ಚನ್ನು ದಯೆಪಾಲಿಸುವುದು, ಇವೆರಡೇ ಪರಶುರಾಮನಿಗೆ ಉಳಿದಿರುವ ವಸ್ತುಸ್ಥಿತಿ. ಇವೆರಡರಲ್ಲಿ ಸಹಾನುಭೂತಿಯ ಕಾರಣದಿಂದ ವಿವಾಹವೇ ಆಗಲಿ ಎಂಬುದು ಭೀಷ್ಮರ ಆಶಯ. ಅದಕ್ಕೆ ಉಳಿದಿರುವ ದಾರಿ ಭೀಷ್ಮರಿಗೆ ವಿವೇಕ ಹೇಳುವುದು. ಕೇಳಿದರೆ ಸರಿ; ಇಲ್ಲದಿದ್ದರೆ ಬಲಪ್ರಯೋಗ ಮಾಡುವುದು–ಇದು ಪರಶುರಾಮನ ನಿರ್ಧಾರ. ಇದು ಯಾರಾದರೂ ಒಪ್ಪಿಕೊಳ್ಳಬಹುದಾದ ಸಂಗತಿ. ಆದ್ದರಿಂದ 'ತಾಯಿಯಂತೆಯೇ ತುಂಬಾ ನಂಬಿಕೊಂಡಿರುವ' ಎಂಬ ಅರ್ಥವನ್ನು ಸಂದರ್ಭ ಸ್ವೀಕರಿಸದು.

ಹಲವು ಪ್ರತಿಗಳಲ್ಲಿ 'ಲಂ' ಎಂದಿರುವುದು ಬೆಳ್ಳಾವೆಯವರ ಗಮನಕ್ಕೆ ಬಂದಿದೆ. 'ಪ್ರೊಲಂ' ಸಂದರ್ಭಕ್ಕೆ ಹೊಂದಿಕೊಳ್ಳುವುದಿಲ್ಲವೆಂಬುದನ್ನರಿತೇ [ವ] ಲಂ ಎಂದು ಪಾಠನಿರ್ಧಾರಮಾಡಿರಬೇಕು. ಪ್ರತಿಕಾರ ಉದ್ದೇಶಪಟ್ಟು ತಿದ್ದಬಹುದಾದದ್ದು 'ವಲಂ' ಎಂಬ ಪಾಠವನ್ನೇ. ಏಕೆಂದರೆ 'ಪ್ರೊಲ್' ಎಂಬಷ್ಟು ಸರಳವಲ್ಲ ಅದರ ಅರ್ಥ. ಎಂದರೆ 'ವಲಂ' ಎಂಬುದೇ ಕ್ಲಿಷ್ಟಪದ.

ಅರ್ಥದ ದೃಷ್ಟಿಯಿಂದ, ಸಂದರ್ಭದ ದೃಷ್ಟಿಯಿಂದ ಮಧುಸೂದನರ ಪಾಠ ನಿರ್ಧಾರ ಅಸಮರ್ಪಕ. 'ಅಂಬೆ' ಎಂಬುದಕ್ಕೆ 'ಮಗಳು' ಎಂಬ ಅರ್ಥವಿಲ್ಲವೆನ್ನುವುದರಿಂದ. 'ಅಂಬೆ' ಶಬ್ದಕ್ಕೆ ಅಂಬು + ಎ ಎಂಬ ಅರ್ಥವೇ ಸಮಂಜಸವಾಗುತ್ತದೆ. ಆದ್ದರಿಂದ '[ವ]ಲಂ' ಎಂಬ ಪಾಠ ಸಮರ್ಪಕವಾಗಿದೆ. 'ವಲಂ' ಎಂಬುದಕ್ಕೆ ಅಲ್ಲವೆ, ಸರಿ ಎಂಬ ಅರ್ಥವೂ ಉಂಟು. ನಿದರ್ಶನಕ್ಕೆ 'ಅಂತೆ ವಲಂ' ಎನ್ನುವುದಕ್ಕೆ 'ಹಾಗೆಯೇ ಅಲ್ಲವೆ ?' 'ಹಾಗೆಯೇ ಸರಿ' ಎಂಬ ಅರ್ಥವನ್ನು ಅನ್ವಯಕ್ರಮದಲ್ಲಿ ಹೇಳಲು ಸಾಧ್ಯವಿದೆ. ಆಗ 'ನನ್ನನ್ನು ನಂಬಿದ ಅಂಬೆಗೆ ನನ್ನ ಬಾಣವೇ ಸರಿ" ಎಂದು ಅರ್ಥೈಸಲು ಸಾಧ್ಯವಾಗುತ್ತದೆ. ಅದು ಪರಶುರಾಮನ ನಿರ್ಧಾರಸೂಚಕ ಅಭಿವ್ಯಕ್ತಿಯಾಗಿ ನಿಲ್ಲುತ್ತದೆ.

"ವಿವಾಹವಿಧಿಯುಂ ಮಾಟ್ಟಿಂ ಪೆಜರ್ ಮಾಟ್ಟುರೇ" ಎಂಬಲ್ಲಿ ನಾನು ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಆಗ ನಾನು ವಿವಾಹಕಾರ್ಯವನ್ನು ಮಾಡುತ್ತೇನೆ. ಬೇರೆಯವರು ಮಾಡುವರೇ ? ಎಂದಾಗುತ್ತದೆ.

ಈ ಮೇಲೆ ನಿರೂಪಿತ ಸಂಗತಿಗಳಿಂದ ಹೇಳಬಹುದಾದ್ದು ಇಷ್ಟು:

ಬೆಳ್ಳಾವೆಯವರ ಊಹಾತ್ಮಕ ಪರಿಷ್ಕರಣ ಸಮರ್ಪಕವಾಗಿಯೇ ಇದೆ. ಅವರು 'ಅಂಬೆ' ಎಂಬುದಕ್ಕೆ ಮಗಳು ಎಂದು ಅರ್ಥೈಸಿರುವುದು ಸಮರ್ಪಕವಲ್ಲ. ಡಿ.ಎಲ್.ಎನ್. 'ಅಂಬೆಯೊಳ್' ಎಂಬುದಕ್ಕೆ 'ಅಂಬೆಯಲ್ಲಿ' ಎಂದಿರುವುದು ವಾಕ್ಯವನ್ನು ವ್ಯಾಕರಣ ದೋಷಕ್ಕೆ ಗುರಿಮಾಡುತ್ತದೆ. ಆದ್ದರಿಂದ ಅಂಬೆಗೆ. ಅಥವಾ ಅಂಬೆಯ ವಿಷಯದಲ್ಲಿ ಎಂದು ಅನ್ವಯಾನುಕ್ರಮದಲ್ಲಿ ಅರ್ಥಹೇಳಬಹುದು. ಹೀಗಾಗಿ ವ್ಯಾಕರಣದೋಷ ದೂರವಾಗುತ್ತದೆ. ಎನ್ನ+ಅಂಬು+ಎ ಎಂದು ಡಿ.ಎಲ್.ಎನ್. ಬಿಡಿಸಿರುವುದು ಸರಿಯಾಗಿದೆ. ಹಾಗೆಯೇ ಅರ್ಥವೂ ಸರಿಯಾಗಿ ಹೊಂದುತ್ತದೆ. ಆದ್ದರಿಂದ ಮಧುಸೂದನರ ಪಾಠ ಪರಿಷ್ಕರಣವನ್ನು ಸಂದರ್ಭ ಸಮರ್ಥಿಸುವುದಿಲ್ಲ.

# ಪಂಪಭಾರತದ ವಾಕ್ಯವೊಂದರ ಅರ್ಥವನ್ನು ಕುರಿತು

ಎಚ್. ಎಸ್. ಮುರಳೀಧರ

ಪಾಂಡವರು ರಾಜಸೂಯಯಾಗವನ್ನು ನೆರವೇರಿಸಿದ ಅನಂತರ ದುರ್ಯೋಧನನು ಪಾಂಡವರನ್ನು ಮೀರಿ ನಿಲ್ಲುವುದರ ಕುರಿತಾಗಿ ದುಶ್ಯಾಸನ ಕರ್ಣ ಶಕುನಿ ಸೈಂಧವರೊಂದಿಗೆ ಮಂತ್ರಾಲೋಚನೆಯನ್ನು ನಡೆಸುವ ಸಂದರ್ಭವೊಂದು ಪಂಪಭಾರತದಲ್ಲಿದ್ದು, ಅದು ಹೀಗಿದೆ :

> ....[ಸುಯೋಧನಂ] ದುಶ್ಶಾಸನ ಕರ್ಣ ಶಕುನಿ ಸೈಂಧವರೆಂಬ
> ದುಷ್ಟಚತುಷ್ಟಯದೊಳ್ ಮಂತಣಮಿರ್ದು ದಾಯಿಗರಪ್ಪೊಡೆ
> ಕರಂ ಪೆರ್ಚಿದರವರ ಪೆರ್ಚಿಂಗೇಗೆಯ್ವಂ ಬಸನಂಗಳಂ
> ಸಮಕಟ್ಟುವಮಪ್ಪೊಡೆ ಸಪ್ತವ್ಯಸನಂಗಳಯ್ವರುಮನೊಂದುಂ
> ಗೆಲ್ಪುವಲ್ಲವು ರಾಷ್ಟ್ರವ್ಯಸನಮುಂ ಬಳವ್ಯಸನಮುಂ ಪಾರ್ವ-
> ಮಪ್ಪೊಡವು ಮುನ್ನಮಿಲ್ಲ ಪರಮಂಡಳವ್ಯಸನಮನಾರಯ್ವಂ-
> ಮಪ್ಪೊಡಿತ್ತುಂ ತೆತ್ತುಂ ಬಾಳ್ವ ಮಂಡಲಮಲ್ಲದೆ ಕೀಱಿಯುಂ
> ಮೀಱಿಯುಂ ನೆಗಟ್ವ ಮಂಡಲಮಿಲ್ಲ....[1]

ಇದಕ್ಕೆ ಡಿ. ಎಲ್. ನರಸಿಂಹಾಚಾರ್ ಅವರು ತಮ್ಮ 'ಪಂಪಭಾರತ ದೀಪಿಕೆ'ಯಲ್ಲಿ ಕೊಟ್ಟಿರುವ ಅರ್ಥ ಹೀಗಿದೆ :

> ಮಂತಣಮಿರ್ದು–ಆಲೋಚಿಸಿ; ಪೆರ್ಚ್ಚಿಂಗೆ [Sic. ಪೆರ್ಚಿಂಗೆ]
> –ಹೆಚ್ಚಳಕ್ಕೆ; ಬಸನಂಗಳಂ–ಜೂಜು ಬೇಟೆ ಮುಂತಾದ
> ಸಪ್ತವ್ಯಸನಗಳನ್ನು; ಸಮಕಟ್ಟುವಂ–ಏರ್ಪಡಿಸೋಣ; 'ರಾಷ್ಟ್ರವ್ಯಸನ
> –ರಾಜ್ಯಕ್ಕೆ ಉಂಟಾಗುವ ಪೀಡೆಗಳು; ಬಳವ್ಯಸನ–ಸೈನ್ಯದ

1. 'ಪಂಪಭಾರತ ಎಂಬ ವಿಕ್ರಮಾರ್ಜುನ ವಿಜಯಂ', (ಮೈಸೂರು : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, 1977), ಷಷ್ಠಾಶ್ವಾಸ, 67–ವಚನ.

ಪಿತೂರಿಗಳು;...ಪರಮಂಡಳವ್ಯಸನ–ಶತ್ರುದೇಶಗಳಿಂದ ಆಗುವ ಉಪಟಳ;...[2]

ಇಲ್ಲಿ ನಾವು ಗಮನಿಸಬೇಕಾಗಿರುವುದು 'ರಾಷ್ಟ್ರವ್ಯಸನ', 'ಬಳವ್ಯಸನ' ಮತ್ತು 'ಪರಮಂಡಳವ್ಯಸನ' ಎಂಬ ಪದಗಳ ಅರ್ಥವನ್ನು. ರಚನೆಯ ದೃಷ್ಟಿಯಿಂದ ಈ ಪದಗಳು ಸಪ್ತವ್ಯಸನಗಳ ಪಟ್ಟಿಯಲ್ಲಿ ಬರುವ 'ತನುವ್ಯಸನ', 'ಮನೋವ್ಯಸನ' ಇತ್ಯಾದಿಯಾದ ಪದಗಳಂತೆಯೇ ಇರುವುದೆಂಬುದು ಸುಸ್ಪಷ್ಟ. ಈ ಹಿನ್ನೆಲೆಯಲ್ಲಿ ಈ ಪದಗಳಿಗೆ ಅರ್ಥವನ್ನು ಹೇಳುವುದಕ್ಕೆ ಮೊದಲು ಚನ್ನಬಸವಣ್ಣನು 'ಕರಣ ಹಸಿಗೆ'(19)ಯಲ್ಲಿ ಹೇಳುವ ಈ ವಿವರಗಳನ್ನು ಗಮನಿಸಬೇಕು :

ಸಪ್ತವ್ಯಸನಗಳು :
ತನುವ್ಯಸನ, ಮನವ್ಯಸನ, ಧನವ್ಯಸನ, ರಾಜ್ಯವ್ಯಸನ, ವಿಶ್ವವ್ಯಸನ,
ಉತ್ಸಾಹವ್ಯಸನ, ಸೇವಕವ್ಯಸನ—ಇಂತಿವು ಸಪ್ತವ್ಯಸನಂಗಳು.

ಇದಕ್ಕೆ ವಿವರ :
ತನುವ್ಯಸನವೆತ್ತಿದಲ್ಲಿ ದೇಹ ಬಡವಾಯಿತ್ತೆನುತ್ತಿಹನು.
ಮನವ್ಯಸನವೆತ್ತಿದಲ್ಲಿ ಹುಸಿ, ಕಳವು, ಪರದಾರವ ಬಯಸುತ್ತಿಹನು.
ಧನವ್ಯಸನವೆತ್ತಿದಲ್ಲಿ ಅರ್ಥವ ಬಯಸುತ್ತಿಹನು.
ರಾಜ್ಯವ್ಯಸನವೆತ್ತಿದಲ್ಲಿ ವಾಹನ, ವಸ್ತ್ರ, ಆಭರಣ,
ಅನುಲೇಪನ, ತಾಂಬೂಲವ ಬಯಸುತ್ತಿಹನು.
ವಿಶ್ವವ್ಯಸನವೆತ್ತಿದಲ್ಲಿ, ಗೃಹ ಕ್ಷೇತ್ರ, ಸೀಮೆಗೆ, ಸಂವಾದಿಸುತ್ತಿಹನು.
ಉತ್ಸಾಹವ್ಯಸನವೆತ್ತಿದಲ್ಲಿ ಪುತ್ರಮಿತ್ರಕಳತ್ರಾದಿಗಳ ಬಯಸುತ್ತಿಹನು.
ಸೇವಕವ್ಯಸನವೆತ್ತಿದಲ್ಲಿ ಹೋದಹೆ, ಬಂದಹೆ, ಕೊಂಡಹೆ,
ಕೊಟ್ಟಹೆನೆನುತ್ತಿಹನು.
ಇಂತಿದು ಸಪ್ತವ್ಯಸನಂಗಳ ವಿವರ.[3]

ಈ ವಿವರಗಳ ಪ್ರಕಾರ ವ್ಯಸನಗಳೆಲ್ಲವೂ 'ವ್ಯಕ್ತಿಯ ಮನಸ್ಸಿನಲ್ಲಿ ವಸ್ತುಗಳ ಕುರಿತಾಗಿ' ಆಗತಕ್ಕವು. ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ವಸ್ತುವಿನ

---

2. ಡಾ॥ ಡಿ. ಎಲ್. ನರಸಿಂಹಾಚಾರ್ : 'ಪಂಪಭಾರತ ದೀಪಿಕೆ'. (ಮೈಸೂರು : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1976). ಪುಟ 234.

3. ಡಾ. ಆರ್. ಸಿ. ಹಿರೇಮಠ : 'ಷಟ್ಸ್ಥಲ ಚಕ್ರವರ್ತಿ ಚನ್ನಬಸವಣ್ಣನವರ ವಚನಗಳು'. (ಧಾರವಾಡ : ಕರ್ನಾಟಕ ವಿಶ್ವವಿದ್ಯಾಲಯ, 1965). ಪುಟ 679.

ಕಡೆಯಿಂದ ವ್ಯಕ್ತಿಗೆ ಆಗತಕ್ಕವುಗಳಲ್ಲ.[4] ಈಗ ಈ ಹಿನ್ನೆಲೆಯಲ್ಲಿ, ನೋಡುವುದಾದರೆ, 'ರಾಷ್ಟ್ರವ್ಯಸನ' ಎಂದರೆ 'ರಾಜ್ಯಕ್ಕೆ ಉಂಟಾಗುವ ಪೀಡೆಗಳು' ಅಲ್ಲ; ವ್ಯಕ್ತಿಯ ಮನಸ್ಸಿನಲ್ಲಿ (ಇನ್ನೊಂದು) ರಾಷ್ಟ್ರದ ಬಗೆಗೆ ಉಂಟಾಗುವ ವ್ಯಸನ. ಅಂತೆಯೇ 'ಬಳವ್ಯಸನ' ಮತ್ತು 'ಪರಮಂಡಳವ್ಯಸನ' ಎಂಬ ಪದಗಳೂ ಕೂಡ ಒಟ್ಟಾರೆಯಾಗಿ ಇದೇ ಬಗೆಯ ಅರ್ಥವನ್ನೇ ಸೂಚಿಸುತ್ತಿದ್ದು, ತನ್ನ ಸೈನ್ಯಶಕ್ತಿಯನ್ನು ಬಲಪಡಿಸಿಕೊಂಡು ಮತ್ತೊಂದು ರಾಷ್ಟ್ರವನ್ನು ಆಕ್ರಮಿಸಬೇಕೆಂಬ ಬುದ್ಧಿ ಅಥವಾ ಅಧಿಕಾರದಾಹ ಎಂಬ ಅರ್ಥವನ್ನು ಕೊಡುತ್ತದೆ. ಆದ್ದರಿಂದಲೇ ದುರ್ಯೋಧನನು ಪಾಂಡವರ ಕುರಿತಾಗಿ ' "...ಯಾವುದಾದರು ವ್ಯಸನಗಳಲ್ಲಿ ಅವರನ್ನು ತೊಡರಿಸೋಣವೆಂದರೆ ಸಪ್ತವ್ಯಸನಗಳಲ್ಲಿ ಒಂದಾದರೂ ಅವರಯ್ವರನ್ನೂ ಗೆಲ್ಲುವುವಲ್ಲ[5] ; ರಾಷ್ಟ್ರವ್ಯಸನವನ್ನೂ ಬಲವ್ಯಸನವನ್ನೂ ನೋಡೋಣವೆಂದರೆ ಅವು ಮೊದಲೇ ಇಲ್ಲ; ಪರಮಂಡಲವ್ಯಸನವನ್ನು ಪರೀಕ್ಷಿಸೋಣವೆಂದರೆ ಇತ್ತು ತೆತ್ತು ಬಾಳುವ ಮಂಡಲಗಳಲ್ಲದೆ ಮುಳಿದು ಎದುರು ಬೀಳುವ ಮಂಡಲವಿಲ್ಲ;...." '[6] ಎಂದು ಹೇಳುವುದು.

---

4. ಈ ವಚನದ ಹಿನ್ನೆಲೆಯಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದುದು '——ವ್ಯಸನ' ಎಂಬ ರಚನೆಯ ಪದಗಳು ಸೂಚಿಸುವ ಅರ್ಥವನ್ನೇ ಹೊರತು. ಸಪ್ತವ್ಯಸನಗಳ ಪಟ್ಟಿ ಪಂಪನ ಪ್ರಕಾರ ಏನಾಗಿತ್ತು ಎನ್ನುವುದನ್ನಾಗಲಿ, ಚನ್ನಬಸವಣ್ಣನ ಪ್ರಕಾರ ಏನಾಗಿತ್ತು ಎನ್ನುವುದನ್ನಾಗಲಿ ಅಲ್ಲ. ಏಕೆಂದರೆ ಈ ಸಪ್ತವ್ಯಸನಗಳ ಕುರಿತಾಗಿ ಬೇರೆ ಬೇರೆ ಪಟ್ಟಿಗಳು ಸಿಗುವುದುಂಟು.

5. 'ಸಪ್ತವ್ಯಸನಂಗಳಯ್ವರುಮನೊಂದುಂ ಗೆಲ್ವುವಲ್ಲವು' ಎಂಬಲ್ಲಿ ಸಪ್ತವ್ಯಸನಗಳು ಹೊರಗಿನಿಂದ ಪ್ರವರ್ತಿಸುತ್ತವೆಯೆಂಬ ಅರ್ಥ ಬರುವಂತಿದ್ದರೂ, 'ಅನುಭಾವದಲ್ಲಿ ನೆಲೆಗೊಂಡವನನ್ನು ಅರಿಷಡ್ವರ್ಗಗಳೊಂದೂ ಗೆಲ್ಲಲಾರವು' ಎಂಬ ವಾಕ್ಯದಂತೆ ಇದು ನಿರೂಪಣೆಯ ಇನ್ನೊಂದು ವಿಧಾನವೇ ಹೊರತು ವಸ್ತುಸ್ಥಿತಿಯಲ್ಲ.

6. 'ವಿಕ್ರಮಾರ್ಜುನ ವಿಜಯಂ' (ಪೂರ್ವೋಕ್ತ), ಪುಟ 45. ಈ ಗದ್ಯಾನುವಾದದಲ್ಲಿ ಕೇವಲ ಮೂಲದ ಯಥಾವತ್ತಾದ ಅನುವಾದ ಮಾತ್ರ ಇದೆಯಲ್ಲದೆ, ಈ ವ್ಯಸನಗಳು ವ್ಯಕ್ತಿನಿಷ್ಠವೆಂದಾಗಲಿ ವಸ್ತುನಿಷ್ಠವೆಂದಾಗಲಿ ಸೂಚಿತವಾಗುವುದಿಲ್ಲ.

## ಗ್ರಂಥವಿಮರ್ಶೆ

## ಛಂದೋಮಿತ್ರ*

ಛಂದಸ್ಸು, ವ್ಯಾಕರಣ ಅಲಂಕಾರ ಇವೇ ಮೊದಲಾದ ಶಾಸ್ತ್ರೀಯ ವಿಷಯಗಳನ್ನು ಕುರಿತು ಕನ್ನಡದಲ್ಲಿ ಕೃತಿರಚನೆಗೆ ಕೈಹಾಕುವ ಎಲ್ಲ ಲೇಖಕರಿಗೂ ಎದುರಾಗುವ ಒಂದು ಮುಖ್ಯ ಸಮಸ್ಯೆಯೆಂದರೆ, ತಾವು ಬರೆಯಹೊರಟಿರುವ ಗ್ರಂಥದ ತಾಂತ್ರಿಕ ಭಾಗವನ್ನು ಹೇಗೆ ನಿರೂಪಿಸುವುದು ಎಂಬುದೇ ಆಗಿರುತ್ತದೆ.

ನಡೆದು ಬಂದ ದಾರಿಯನ್ನೇ ಹಿಡಿದು ಒಂದು ಪದ್ಯ ಸೂತ್ರ ಅಥವಾ ಶ್ಲೋಕ ಹೇಳಿ ಅದನ್ನು ಗದ್ಯರೂಪದಲ್ಲಿ ವಿವರಿಸಿಬಿಟ್ಟರೆ ಸಾಕೋ ಅಥವಾ ಅನನ್ಯವಾದ ಅನ್ಯಮಾರ್ಗಗಳೇನಾದರೂ ಇವೆಯೋ ? ಈ ಪ್ರಶ್ನೆಗೆ ಸೂಕ್ತ ಉತ್ತರವನ್ನು ಪ್ರೊ. ಅ. ರಾ. ಮಿತ್ರರ 'ಛಂದೋಮಿತ್ರ' ಎಂಬ ಪದ್ಯಕೃತಿ ಬಹು ಸಾರ್ಥಕ ರೀತಿಯಲ್ಲಿ ಕೊಡುತ್ತದೆ.

'ಛಂದೋಮಿತ್ರ'ದ ವಸ್ತು ಛಂದಃಶಾಸ್ತ್ರ. ರಚನೆ ಇರುವುದು ಪದ್ಯರೂಪದಲ್ಲಿ. 'ಛಂದಸ್ಸು' ಎಂಬ ಹೆಸರನ್ನು ಕೇಳಿಯೆ ಬೆಚ್ಚಿಬೀಳಬೇಕಾದ್ದಕ್ಕೆ ಕಾರಣವೇ ಇಲ್ಲ. ಒಲಿಯಬಲ್ಲವರಿಗೆ ಒಲಿಸಿಕೊಳ್ಳಬಲ್ಲವರಿಗೆ ಛಂದಸ್ಸು ನಿಜದಲ್ಲಿ ಒಬ್ಬ ಮಿತ್ರ ಎಂದು ಮನವರಿಕೆ ಮಾಡಿಕೊಡುವುದು ಈ ಕೃತಿಯ ಆಶಯ.

'ಒಂದೂವರೆ ಸಾವಿರ ವರ್ಷಗಳಲ್ಲಿ ಛಂದಸ್ಸು ಬೆಳೆದು ಬಂದ ರೀತಿಯನ್ನು ಆಯಾ ಛಂದಸ್ಸಿನ ತಿಳಿಹಾಸ್ಯದ ಪದ್ಯಗಳ ಮೂಲಕವೇ ಸಾದರಪಡಿಸುವ ಲಕ್ಷಣ-ಲಕ್ಷ್ಯ ಸಮನ್ವಿತವಾದ ಕೃತಿ 'ಛಂದೋಮಿತ್ರ' (ಈ ಮಾತುಗಳು ಕೃತಿಗೆ ಮುನ್ನುಡಿ ಬರೆದಿರುವ ರಾ. ಗಣೇಶ್ ಅವರದು)

---

* ಛಂದೋಮಿತ್ರ—ಅ. ರಾ. ಮಿತ್ರ. ಕಾಮಧೇನು ಪ್ರಕಾಶನ, ಶೇಷಾದ್ರಿಪುರ, ಬೆಂಗಳೂರು-20. 1990. ಪುಟ 168+16. ಬೆಲೆ : 30-00. ಉತ್ತಮ 50-00.

(ಛಂದಸ್ಸಿನ) 'ರಥ ಎಳೆದ ಎಲ್ಲರಿಗೆ ನಮನ
ನಾನೂ ಎಸೆಯುತ್ತಿದ್ದೇನೆ ಒಂದು ದವನ'

ಎಂಬ ಅರ್ಪಣಾವಾಕ್ಯದಿಂದ ಕೃತಿ ಆರಂಭವಾಗುತ್ತದೆ.

ಛಂದಸ್ಸು ಎಂದರೇನು ? ಅದಕ್ಕೆ ಉತ್ತರ ಈ ಕಂದದಲ್ಲಿದೆ–

'ಛಂದಸ್ಸೆಂಬುದು ಕಾವ್ಯದ
ಬಂಧದ ಕೀಲುಗಳ ತೆರೆದು ತೋರುವ ಶಿಲ್ಪಂ
ವಂದ್ಯರ ಕವಿಗಳ ಪ್ರತಿಭಾ
ಸ್ಪಂದದ ನಾಡಿಗಳ ಮಿಡಿದು ನೋಡುವ ಶಾಸ್ತ್ರಂ.'

ಮುಂದೆ ತಾಳ ಲಯ ಗಣ ಯತಿ ಗತಿ ನಾದ ಪ್ರಾಸ ಯಮಕ ಇವೇ ಮೊದಲಾದ ಛಂದಃಶಾಸ್ತ್ರದ ಪರಿಭಾಷೆ (Terminology)ಗೆ ಪದ್ಯರೂಪದ ವ್ಯಾಖ್ಯೆಗಳಿವೆ. ಯಮಕ ಅನುಪ್ರಾಸಗಳಿಗೆ ಉದಾಹರಣಾರ್ಥವಾಗಿ ಬಂದಿರುವ ಪದ್ಯದ ಒಂದು ಭಾಗ ಹೀಗಿದೆ–

'ಕೊನೆಗಾದಾಯಕು ಇಹುದು ಕರ
ತೆರಬೇಕೊಬ್ಬನೆ ಎಲ್ಲ ಕರ
ಹೇಳಿರಿ ಮನುಜರಿಗೆಷ್ಟು 'ಕರ'
ಉತ್ತರ ತುಂಬ ಆಯಾಸಕರ'

'ವರ್ಣಗಣ' ಎಂಬ ಅಧ್ಯಾಯದಲ್ಲಿ ಲಘು ಗುರು ಪ್ಲುತ ಇವುಗಳ ಗಣಿತವನ್ನು ಪದ್ಯರೂಪದಲ್ಲಿ ತೋರಿಸಲಾಗಿದೆ. ಲಘು ಗುರುಗಳ ಎಣಿಕೆಯ ಕ್ರಮವನ್ನು ಈ ಪದ್ಯ ವಿವರಿಸುತ್ತದೆ.

'ಉಚ್ಚಾರದ ಒಂದಂಶವೆ ಲಘುವೋ
ಎರಡಾದರೆ ಅದು ಗುರುವೆನ್ನು
ಹೆಚ್ಚಿದ್ದರೆ ಪ್ಲುತವೆಂಬರು ಆದನು
ಛಂದದಿ ಗಣಿಸೀ ಮೂರನ್ನು'

ವರ್ಣಗಣದಲ್ಲಿ 'ಮ'ಗಣ, 'ಯ'ಗಣ, 'ರ'ಗಣ 'ಸ'ಗಣ 'ತ'ಗಣ 'ಜ'ಗಣ 'ಭ'ಗಣ 'ನ'ಗಣ ಎಂದು ಎಂಟು ಪ್ರಭೇದಗಳುಂಟಷ್ಟೆ. 'ಜ'ಗಣಕ್ಕೆ ನಿದರ್ಶನವಾಗಿ ಈ ಪದ್ಯ ಯಾಕಾಗಬಾರದು ? [ಜಗಣವಲಿ ಗುರುಮಧ್ಯೆ ∪–∪]

'ಫಲಾರವ ಮಾಡಿದ ನಂತರ ಕಾಫಿ
ಸುಭೋಜನವಾದರೆ ಕೊಡಲೆ ನಿದ್ದೆ'

ಗುರುವೊಂದು ಲಘುವೆರಡು ಬಂದರೆ ಭಗಣ (–∪∪). ಭಗಣದ ಲೆಕ್ಕಾಚಾರವನ್ನು ವಿವರಿಸಲು ಈ ವಿನೋದ ರಚನೆ ಇದೆ :–

'ಹಳ್ಳಿಯ ಬಾಲೆಯು ಮುಗ್ಧಳು ಅಲ್ಲವೆ ?
ಆದರು ಗಂಡನ ಬುದ್ಧಿಯ ಬಲ್ಲಳು'

ಸಕಲ ಲಘುವಕ್ಷರಗಳಲ್ಲಿರುವ (ತಗಣ) 'ಕೊಳಲ ಚೆಲುವ' ಎಂಬ ಪದ್ಯದಲ್ಲಿ ವಿನೋದಗಾರ ಮಿತ್ರರು ಮರೆಯಾಗಿ ಶುದ್ಧ ಕವಿ ಮಿತ್ರರು ಕಾಣಿಸಿಕೊಳ್ಳುತ್ತಾರೆ.

'ಕರದಿ ಕೊಳಲ ಹಿಡಿದ ಚೆಲುವ
ಮುದದಿ ಮನದ ಒಳಗೆ ಸುಳಿವ
ಕೆನೆಯ ಮೊಸರ ಕದಿವ ಹುಡುಗ
ಹಿಡಿಯೆ ಸಿಗದ ಚಿಗರಿ ತುಡುಗ

ಗೆಳತಿಯೊಡನೆ ಕುಣಿದು ನಲಿವ
ಗೆಳೆಯರೊಡನೆ ಅಡವಿಯಲೆವ
ಹಣೆಯಲಿದಕೊ ಕರಿಯ ತಿಲಕ
ಕೊಳಲ ದನಿಗೆ ಧರೆಯೆ ಪುಲಕ

ಹಳದಿಯರಿವೆ ನವಿಲುಗರಿಯು
ಘುಲುಘುಲೆನುವ ಕಡಗದುಲುಹು

ಕೊರಳಲಿಹುದು ಹುಲಿಯ ಉಗುರು
ಘಮಘಮಿಪುದೊ ತುಲಸಿಯುಸಿರು'

ಅಕ್ಷರ ವೃತ್ತಗಳಲ್ಲಿ ಉತ್ಪಲ ಚಂಪಕ ಮತ್ತೇಭ ವಿಕ್ರೀಡಿತ, ಶಾರ್ದೂಲ, ಸ್ರಗ್ಧರಾ ಎಂದಿತ್ಯಾದಿಯಾಗಿ ಸೂಕ್ಷ್ಮತೆಗಳುಂಟು. 'ಸ್ರಗ್ಧರಾ' ವಿಧಾನದ ಪದ್ಯರಚನೆಗೆ ದೃಷ್ಟಾಂತವಾಗಿ ಹೀಗೊಂದು ಪದ್ಯ–

"ದ್ವೈತಂ ಸರ್ವೊಂದು ತತ್ತ್ವಂ ಮಗಳೆ ತಿಳಿದಿರೈ ಗೀತವೇ ಬೇರೆ ಆ ಸಂ
ಗೀತಂ ಪೇಳ್ವಾತನೇ ಬೇರೆ ಮನೆತನದ ಮರ್ಯಾದೆಯೂ ಮುಖ್ಯ ಗೊತ್ತೇ ?"
–ಇಂತೆಲ್ಲಂ ತಂದೆ ಮುನ್ನಂ ತಿಳಿಸಿ ಕರೆದುರೆಕ್ಕೈಯುಂ ಬಿಟ್ಟು ದೂರಾದಂ ಆ
ಗೀತಾಚಾರ್ಯಂಗೆ ಸೋತಳ್ ಮಗಳು ನಿಜದಿನದ್ವೈತಮಂ ಸಾಧಿಸಿರ್ದಳ್

['ದ್ವೈತ'ಮತದ ಹಿರಿಮೆಯನ್ನು ಎತ್ತಿ ಹಿಡಿಯಬೇಕಾದ ಹೆಣ್ಣೊಬ್ಬಳು, ತನ್ನ ತಂದೆಯ ಹಿತವಚನವನ್ನು ಮರೆತು ಸಂಗೀತಗುರುವಿಗೆ ಮನಸೋತು ನಿಜದಲ್ಲಿ 'ಅದ್ವೈತ ಮತ'ವನ್ನು ಸಾಧಿಸಿಬಿಟ್ಟಳು ಎಂದು ಈ ಹಾಸ್ಯಪದ್ಯದ 'ಅರ್ಥ']

ಹದಿನೈದು ಅಕ್ಷರದ 'ಉತ್ಸಾಹ ವೃತ್ತ' ಅಥವಾ ಚಾರುಚಾಮರಂ ಲಕ್ಷಣದ ರಚನೆಗೆ 'ಗುಟ್ಟು-ರಟ್ಟು' ಎಂಬ ಪುಟ್ಟ ಪದ್ಯವನ್ನು ನೋಡಬಹುದು–

"ಗುಟ್ಟು ಹೇಳಿ ಯಾರಿಗೂನು ಹೇಳಬೇಡ ಎಂದರೂ
ಎಲ್ಲ ಮಂದಿಗೂನು ನೀನು ಹೇಳಿಕೊಂಡು ಬಂದೆಯಾ ?"
"ಶುದ್ಧ ಸುಳ್ಳು ಎಲ್ಲ ಮಂದಿಗೆಂತು ಪೇಳಲಾಪುದೈ
ದಾರಿಯಲ್ಲಿ ಸಿಕ್ಕ ಮಂದಿಗಷ್ಟೆ ಪೇಳ್ದುದುಂಟು ನಾಂ"

'ಅವಿತಥ' ಎಂಬ ಹದಿನೇಳು ಅಕ್ಷರದ ವೃತ್ತದಲ್ಲಿ 'ಕನಕನ ಕಿಂಡಿ'ಗೆ ಏನಾಗಿದೆ ನೋಡಿರೈ–

'ಕನಕನ ಕಿಂಡಿ ದಾಸನಿಗೆ ದೈವವ ಕಾಣಿಸಿತೈ
'ಕನಕದ ಕಿಂಡಿ' ಫೈಲುಗಳ ದೈವವ ತೋರಿಪುದೈ'

[ಇಂದಿನ ಸರಕಾರಿ ಆಫೀಸುಗಳ ಕುಹಕ ಚಿತ್ರ ಇದು. ಅಷ್ಟಮಠಗಳ ಊರಾದ ಉಡುಪಿಯ ಶ್ರೀಕೃಷ್ಣ ಕನಕದಾಸರಿಗೆ 'ಕನಕನ ಕಿಂಡಿ'ಯ ದ್ವಾರಾ ಪ್ರತ್ಯಕ್ಷನಾದ. ಅಷ್ಟ ಸೆಕ್ರೆಟರಿಗಳ ಆವಾಸಸ್ಥಾನವಾದ ಯಾವುದೇ ಸರಕಾರಿ ಕಛೇರಿಯಲ್ಲಿ 'ಕನಕದ ಕಿಂಡಿ'ಯ ಮೂಲಕ ನೋಟುಗಳು ತೂರಿದ ಬಳಿಕವೆ ನಿಮಗಾಗಬೇಕಾದ ಕೆಲಸವೆಂಬ ದೇವರು ಪ್ರತ್ಯಕ್ಷನಾಗುತ್ತಾನೆ]

ಕಂದರಚನೆಯ ಕ್ರಮವನ್ನು ಹೇಳಿ ಅವನ್ನು ವಿಶದಪಡಿಸಲು ಈ ಒಂದು ಪದ್ಯವಿದೆ–

'ಮನಸು ನಪುಂಸಕ ಲಿಂಗಂ
ಎನೆ ಪಾಣಿನಿರಾಯ ನಂಬಿ ಕೆಟ್ಟೆಂ ದಡ್ಡಂ
ಮನಸನು ಅವಳಿಗೆ ಕೊಟ್ಟೆಂ
ಶನಿಮನ ಸೊಂಪಾಗಿ ನಿಂತಿತಲ್ಲಿ ಯೆ–ಸತ್ತೆಂ'

['ಮನಸ್ಸು' ಎನ್ನುವ ಶಬ್ದ ನಪುಂಸಕ ಲಿಂಗದಲ್ಲಿದೆ. ಅವರೆ ಮನಸ್ಸನ್ನು 'ಅವಳಿಗೆ' ಕೊಟ್ಟವನು ನಪುಂಸಕನಲ್ಲವಷ್ಟೆ !]

ಇದೊಂದು ವಚನ ರಚನೆ. ಕಾಪಿರೈಟು ಪ್ರೊ. ಅ.ರಾ. ಮಿತ್ರರದ್ದು–

'ಅಯ್ಯಾ ಎಂದಡೆ ವರ್ಗ
ಎಲವೋ ಎಂದಡೆ ಪ್ರಮೋಷನ್'

ವಚನಕಾರರಾಗಿದ್ದಷ್ಟೇ ಸಾಲದೆ, ಮಿತ್ರರು ಕೀರ್ತನಕಾರರಾಗಿಯೂ ಕೀರ್ತಿಭಾಜನರಾಗುತ್ತಾರೆ–

'ಏನಾಗುವನೋ ಹುಡುಗ ನಾನಂತು ಅರಿಯೆನು
ನೀವಾದರೂ ಹೇಳಿರೇ । ಬಲ್ಲ....॥ಪ॥
.................................
ಮಾಡುವ ಕೆಲಸವು ಅರ್ಧಂಬರ್ಧವೆ
ದೊಡ್ಡ ಕಂಟ್ರಾಕ್ಟರನಾಗುವನೋ
.................................
ನಿದ್ದೆಗಣ್ಣಲಿ ಕೂಡ ಕೈಯ ಮೇಲೆತ್ತುವನು
ಆಡಳಿತ ಪಕ್ಷಕೆ ಸೇರುವನೋ
.................................
ಮೋಹಿಸಿ ವಸ್ತುವ ಕದ್ದು ಸಂಗ್ರಹಿಪನು
ಸಾಹಿತಿಯಾಗಲು ತಕ್ಕವನೋ
.................................
ನೆಚ್ಚಿದ ತಾಯ ಮೇಲಭಿಮಾನವಿನಿತಿಲ್ಲ
ಅಚ್ಚ ಕನ್ನಡಿಗನೇ ಆಗುವನೋ'

'ಏಳೆ' ಎಂಬ ಪದ್ಯರಚನಾಕ್ರಮಕ್ಕೆ ಈ ಇನಿದಾದ ಕಿರುಪದ್ಯಕ್ಕಿಂತ ಒಳ್ಳೆಯ ಉದಾಹರಣೆ ಯಾಕೆ ಬೇಕು ?

'ಸುಂದರಿ ಶಿಕ್ಷಿತೆ ಸುಮಧುರೆ ಸಂಪನ್ನೆ
ಎಂದರೆ ಅವಳೇ ಪರಪತ್ನಿ'

'ಭಾಮಿನೀ ಷಟ್ಪದಿ'ಯಲ್ಲಿರುವ ಈ ರಚನೆಯ ವಿವರಣೆಯೊಂದಿಗೆ 'ಛಂದೋಮಿತ್ರ' ಈ ಅತ್ಯಂತ ಕಿರುಪರಿಚಯವನ್ನು ಮುಗಿಸಬಹುದು.

"ಇವಗೆ ಭಾಮಿನಿ ಹುಚ್ಚು ಒಂದೇ
ಸಮನೆ ಮಾತ್ರೆಗಳೇಳ ಕೊಡುತಿರಿ
ಕ್ರಮವ ತಪ್ಪದೆ ಮೂರು ನಾಲ್ಕರ ತೆರದಿ ಏಳು ಸಲ
ಸವೆಯದಿರೆ ಮತ್ತೊಂದು ಮಂಡಲ
ಹವಣಿಸುತ ಬರೆ ಲೇಸು ಕೇಳಿರಿ
ವಿವರಪೇಳಿರಿ ಕೊನೆಗೆ ಗುರುಕೃಪೆಯಿರಲು ಬದುಕುವನು"

ಇಪ್ಪತ್ತು ಮತ್ತು ನಾಲ್ಕು, ನೂರು ಮತ್ತು ಹತ್ತು–ಎಂದು ವಿಗ್ರಹಿಸಿ ಇದು ದ್ವಂದ್ವ ಸಮಾಸವೆಂದರೂ ಸರಿಯೇ. ಸಂಸ್ಕೃತದಲ್ಲಿ 'ದ್ವಾದಶ' ಮುಂತಾದವು ದ್ವಂದ್ವ ವೆಂದೂ ಅಥವಾ ಮಧ್ಯಮಪದ ಲೋಪಿ ಸಮಾಸವೆಂದೂ ಮಹಾಭಾಷ್ಯಕಾರರೇ ಹೇಳಿದ್ದಾರೆ.

೫. ಕನ್ನಡದಲ್ಲಿ 'ಉಪಪದ' ಎಂಬ ಇನ್ನೊಂದು ಪದಭೇದವನ್ನೊಪ್ಪಿದರೆ ಗಮಕಸಮಾಸದ ಸಮಸ್ಯೆ ಬಗೆಹರಿಯುವುದೆಂದೂ ಅದನ್ನು ಸಮಾಸವೆಂದು ಒಪ್ಪದಿರಲು ಸಾಧ್ಯವೆಂದೂ ಶ್ರೀ ಸೇಡಿಯಾಪು ಅವರು ಒಂದು ಸಲಹೆಯನ್ನು ನೀಡಿದ್ದಾರೆ. ಇದು ಮನನೀಯವೇನೋ ಹೌದು. ಆದರೆ ಮನನಮಾಡಿದಾಗ ಈ ತೊಡಕುಗಳು ಎದುರಾಗುತ್ತವೆಯೆಂದು ನನ್ನ ಅಲ್ಪಮತಿಗೆ ತೋರುತ್ತದೆ–

೧. ಬಿಳಿದು, ಹಿರಿದು–ಮುಂತಾದವು ಬಿಳಿಯ, ಹಿರಿಯ–ಇತ್ಯಾದಿ ರೂಪಗಳನ್ನು ಯಾವಾಗ ತಳೆಯುತ್ತವೆಯೆಂಬುದನ್ನು ವಿವರಿಸಬೇಕಾದ ಪ್ರಸಂಗ ಉಳಿದುಕೊಳ್ಳುತ್ತದೆ.

೨. ಅಥವಾ–ಬಿಳಿಯ, ಹಿರಿಯ, ಕಂಡ, ಹೋದ–ಮುಂತಾದ ಉಪಪದಗಳ ಒಂದು ಪಟ್ಟಿಯನ್ನು ಸಿದ್ಧಪಡಿಸಿ, ಇವು ಅವ್ಯಯಗಳೆಂದೂ ಲಿಂಗ, ವಚನಗಳ ತೊಡಕು ಇವುಗಳಿಗೆ ಇಲ್ಲವೆಂದೂ ಹೇಳಬೇಕು. ವಿಶೇಷ್ಯದ ಹಿಂದೆಯೇ ಬರುತ್ತವೆಯೆಂದು ತಿಳಿಸಬೇಕು. ಕಂಡ, ಹೋದ–ಮೊದಲಾದವು ಕೃದಂತ ಪ್ರತಿರೂಪ ಕಾವ್ಯಯಗಳೆಂಬ ಒಂದು ಒಳ ಭೇದವನ್ನು ಹೇಳಿ. ಇವು ವಿಶೇಷ್ಯಗಳ ಮುಂದೆಯೂ ವ್ಯವಹಿತವಾಗಿಯೂ ಕೆಲವೆಡೆ ಬರುತ್ತವೆಯೆಂದು ತಿಳಿಸಬೇಕಾಗುತ್ತದೆ, ಕಂಡನು, ಹೋದನು–ಇತ್ಯಾದಿ ಸ್ಥಳಗಳಲ್ಲಿ ಮಾತ್ರ ಇವು ಕ್ರಿಯಾಪದದ ಅವಯವಗಳೆಂದೂ ಉಪಪದಗಳಲ್ಲವೆಂದೂ ತಿಳಿಸಬೇಕಾದೀತು.

೩. ಆ, ಈ, ಯಾವ, ಎಲ್ಲ–ಇವುಗಳ ಮೂಲರೂಪ ಯಾವುದು ? ಮೂಲ ರೂಪಗಳಿದ್ದರೆ ಯಾವಾಗ ಈ ರೂಪಗಳು ಬರುತ್ತವೆಯೆಂಬುದನ್ನು ವಿವರಿಸಬೇಕಾದೀತು.

೪. ಅದು, ಇದು, ಯಾವುದು, ಎಲ್ಲದು–ಇವು ವಿಶೇಷ್ಯದೊಡನೆ ಏಕೆ ಸಮಾಸಗೊಳ್ಳುವುದಿಲ್ಲವೆಂಬುದನ್ನು ಹೇಳಬೇಕಾದೀತು. ಸಮಾಸವಾದರೆ ಇವುಗಳ ರೂಪವೇನು ?—ಎಂಬ ಪ್ರಶ್ನೆ ಉಳಿದುಕೊಳ್ಳುತ್ತದೆ.

ಇಷ್ಟಾಗಿ ವಿಶೇಷಣ ಸಮಾಸವು ನಿತ್ಯಸಮಾಸವಲ್ಲ. ಅದ್ದರಿಂದ 'ಮಾಳ್ಪ' ಮುಂತಾದ ಶಬ್ದಗಳಿಗೆ ಸಮಾಸ ಬಂದಿಲ್ಲವಾದ್ದರಿಂದ ಪೃಥಕ್ಕಾಗಿ ವ್ಯವಹಿತ ಪ್ರಯೋಗ ವಿದ್ದರೆ ಬಾಧಕವೇನೂ ಇಲ್ಲ. 'ಕಲಿಯಸೆ ಪಂದೆ ಮಾಳ್ಪ, ಕಡುಪಂದೆಯನೊಳ್ಗಲಿ ಮಾಳ್ಪ' ಎಂಬ ಪದ್ಯದಲ್ಲಿ 'ಮಾಳ್ಪ' ಎಂಬುದು ವಿಧೇಯ ವಿಶೇಷಣವಾಗಿ ವಿವಕ್ಷಿತವಾಗಿದೆ. ವಿಶೇಷಣ ವಿಶೇಷ್ಯಗಳಿಗೆ ಸಾಮರ್ಥ್ಯವಿಲ್ಲವಾದ್ದರಿಂದ ಸಮಾಸ ಬರಲು ಶಕ್ಯವೇ ಇಲ್ಲ, 'ಸಮರ್ಥಃ ಪದವಿಧಿಃ' ಎಂದು ಭಟ್ಟಾಕಳಂಕನು ಸೂತ್ರಿಸಿದ್ದಾನೆ.

ಸಂಸ್ಕೃತದಲ್ಲಿಯೂ ಇದೇ ನಿಯಮ ಉಂಟು. ಇದು ಗಮಕಸಮಾಸವೆಂದಿರುವುದು ಪ್ರಾಮಾದಿಕ (ಪುಟ ೨೯ ನೋಡಿ). ಅನುವಾದ್ಯ ವಿಶೇಷಣವಾದರೆ ಮಾತ್ರ ಸಮಾಸ ಬರುತ್ತದೆ.

೪-೫ನೇ ಪುಟದಲ್ಲಿ 'ಕುಂಭಕಾರ' ಶಬ್ದದ ಕುಂಭ ಎಂಬ ಉಪಪದವು ಪೂರ್ಣ ಪದವೆಂದೂ ಮತ್ತೆ ಅದೇ ಪುಟದಲ್ಲಿ ಅಪೂರ್ಣಪದವೆಂದೂ ಮುದ್ರಿತವಾಗಿದೆ. ಇಲ್ಲಿ ಪೂರ್ಣಪದ ಎಂದಿರುವುದು ಮುದ್ರಣ ದೋಷದಿಂದಾಗಿರಬಹುದು.

ಈ ಬಗೆಯ ಇನ್ನೂ ಕೆಲವು ಬಿಕ್ಕಟ್ಟುಗಳಿಂದ ಪಾರಾಗಲು, ಕೇಶಿರಾಜನೂ ಭಟ್ಟಾಕಳಂಕನೂ ಮೇಲ್ಕಂಡ ಸ್ಥಳಗಳಲ್ಲಿ ಸಮಾಸವಾಗುತ್ತದೆಯೆಂದು ಹೇಳಿದ್ದಾರೆ. ಇಷ್ಟರೂಪಸಿದ್ಧಿಗೆ ಇದೊಂದು ಲಘೂಪಾಯ. ಇನ್ನು 'ಗಮಕಸಮಾಸ'ವೆಂಬ ನಾಮಕರಣಕ್ಕೆ ಕಾರಣವಿದೆಯೆಂದು ನನ್ನ ಅಭಿಪ್ರಾಯವಿದೆ. ಇದಿಷ್ಟು ಸಂಕ್ಷಿಪ್ತವಾದ ಅಭಿಪ್ರಾಯ, ವಿಮರ್ಶೆಯಲ್ಲ. ಶಾಸ್ತ್ರಕಾರರ ಕಷ್ಟ ನಮಗೆ ಸರಿಯಾಗಿ ತಿಳಿಯುವುದಿಲ್ಲ.

ಈ ಸಮಸ್ಯೆಯನ್ನು ಬಿಡಿಸುವುದಕ್ಕಾಗಿ ಈ ಸಂಮಾನ್ಯ ಗ್ರಂಥಕರ್ತರು ಪ್ರಯತ್ನಮಾಡಿ ಒಂದು ಹೊಸಬೆಳಕನ್ನು ನೀಡಿದ್ದಾರೆ. ಕನ್ನಡ ವಿದ್ವಲ್ಲೋಕವು ಇವರಿಗೆ ಸದಾ ಕೃತಜ್ಞವಾಗಿರಬೇಕು.

—ಎನ್. ರಂಗನಾಥ ಶರ್ಮಾ

## ಮಕ್ಕಳ ಲೋಕ

ಕನ್ನಡದಲ್ಲಿ ಮಕ್ಕಳಿಗೆ ಬೇಕಾದ ಸಾಹಿತ್ಯ ಬಹಳಷ್ಟು ರಚನೆಯಾಗಿಲ್ಲ. ಆದರೆ ಇತ್ತೀಚಿನ ಕೆಲವು ವರ್ಷಗಳಿಂದ ಪ್ರಮುಖ ಲೇಖಕರು ಮತ್ತು ಉದಯೋನ್ಮುಖ ಬರಹಗಾರರ ದೃಷ್ಟಿ ಇತ್ತಕಡೆ ವಾಲುತ್ತಿದೆ. ಐತಿಹಾಸಿಕ ಪುರುಷರ ಜೀವನ ಚರಿತ್ರೆಗಳು, ಜನಪದ ಕಥೆಗಳು, ಪ್ರಾಸಬದ್ಧವಾದ ಸರಳವಾದ ಕಥನಗೀತಗಳು ಮಕ್ಕಳ ಮನಸ್ಸು ಮುಟ್ಟುವಲ್ಲಿ ಯಶಸ್ವಿಯಾಗುತ್ತಿವೆ. ಉದಾ : 'ತಟ್ಟು ಚಪ್ಪಾಳೆ ಪುಟ್ಟ ಮಗು'........ಮುಂತಾದವು.

ಈ ರೀತಿ ಪ್ರಕಟಣೆಗಳ ಸಾಲಿಗೆ ಸೇರುವ "ಮಕ್ಕಳ ಲೋಕ" ಎಂಬ ಶೀರ್ಷಿಕೆಯನ್ನು ಕುರಿತ ಕವನಸಂಕಲನವನ್ನು ಶ್ರೀಯುತ ಶಿವರಾಮ ಹೆಗಡೆ. ಬಾಳೆಗದ್ದೆಯವರು ರಚಿಸಿದ್ದಾರೆ.

ಇಡೀ ಪುಸ್ತಕ 50 ಪುಟಗಳಿದ್ದು ಉತ್ತಮ ಮುದ್ರಣದಿಂದ ಕೂಡಿದೆ. ಮೂಲತಃ ಕೃಷಿಕರಾದ ಶಿವರಾಮ ಹೆಗಡೆಯವರು ಕಾದಂಬರಿಕಾರರು ಹೌದು. ಜೊತೆಗೆ ಕೆಲವು ಪೌರಾಣಿಕ ನಾಟಕಗಳನ್ನು ಪ್ರಕಟಿಸಿದ್ದಾರೆ.

ಪುಸ್ತಕದ ಮೊದಲನೆಯ ಕವನ 'ನಮನ' ದೇಶಭಕ್ತಿ ಗೀತೆಯಾಗಿದೆ. ಅಂತ್ಯ ಪ್ರಾಸದಿಂದ ಕೂಡಿರುವ ಈ ಪದ್ಯ ಸಾಲನ್ನು ವಿಭಜಿಸುವಲ್ಲಿ ಸಂಪೂರ್ಣವಾಗಿ ಸೋತಿದೆ.

"ಪರರ ಆಕ್ರಮಣಂಗಳನು ನಿ
ವಾರಿಸಿದೆ ವಿದೇಶದ"

ಎನ್ನುವಲ್ಲಿ ಬರೆದವರಿಗೂ ಅರ್ಥವಾಗದ ಪದ ವಿಭಜನೆ ಇದೆ. 'ಪೂಜೆ', 'ನಾಡಿನ ಕರೆ' ಮುಂತಾದವು ಲೇಖಕರ ಪ್ರತಿಭೆಯನ್ನು ತಿಳಿಸುತ್ತವೆ. ಇರಿವೆಯಿಂದ ಹಿಡಿದು ಗಾಂಧೀಜಿಯ ವರೆಗಿನ ವಸ್ತುಗಳನ್ನು ತಮ್ಮ ಗೀತೆಯಲ್ಲಿ ಬಳಸಿಕೊಂಡಿದ್ದಾರೆ. 'ಅಣೆಕಟ್ಟು' ಎಂಬ ಚಿನಕುರುಳಿ ರೂಪದ ಗೀತಗಳಿವೆ. 'ಕರಿಬೇವು' ಎಂಬ ಪದ್ಯದಲ್ಲಿ ಅದರ ಸೌಂದರ್ಯವನ್ನು ಹೊಗಳುವುದರ ಜೊತೆಗೆ 'ಕರಿಬೇವು'ವಿನ ಪ್ರಚಾರ ಕಂಪನಿಯ ಸ್ಲೋಗನ್ನಿನಂತಿದೆ.

'ಕಾಡು' ಎಂಬ ಪದ್ಯ ಸಹಜವಾದ ಪದಗಳಿಂದ ಕೂಡಿದ್ದು ಒಂದು ಅತ್ಯುತ್ತಮ ಪದ್ಯವಾಗಿದೆ.

"ನೋಡು ನೋಡು ಕಾಡು ಮೇಡು
ವನ್ಯಜೀವಿ ಜೀವನ
ಹತ್ತು ಹಲವು ಮತ್ತು ಕೆಲವು
ಅನ್ಯ ಪ್ರಾಣಿ ಚೇತನ"

ಎಂಬ ಸಹಜ ಉಕ್ತಿಗಳು ಕವಿ ಕಾಳಜಿಯನ್ನು ಯಶಸ್ವಿಯಾಗಿ ಪ್ರದರ್ಶಿಸುತ್ತವೆ. 'ಸೂರ' ಎಂಬ ಪದ್ಯದಲ್ಲಿ ಕಬ್ಬಿಣವ ಕೊಡಲಿಯನ್ನೇ ಬಯಸುವ ಕತೆಯಿದೆ. ಇದು ಮಕ್ಕಳಲ್ಲಿ ಜೀವನ ಮೌಲ್ಯವನ್ನು ಬಿತ್ತುವಲ್ಲಿ ಯಶಸ್ವಿಯಾಗಿದೆ.

ಹೀಗೆ ಹಲವಾರು ಕವನಗಳು ಉದಾ : 'ಪೂಜೆ', 'ನಾಡಿನ ಕರೆ' 'ಅಭ್ಯಂಜನ' 'ಕಾಡು', 'ನಮ್ಮ ಜಗತ್ತು', 'ಫ್ಯಾಷನ್' ಮುಂತಾದ ಕೆಲವು ಪದ್ಯಗಳು ಮಕ್ಕಳನ್ನು ಆಕರ್ಷಿಸಿದರೂ, ಪ್ರಾಸಕ್ಕೆ ಜೋತುಬೀಳುವ ಮತ್ತು ಹಿತಮಿತದಲ್ಲಿಲ್ಲದ ಪದಗಳ ಬಳಕೆಯಿಂದಾಗಿ ಪದ್ಯಗಳು ಅಂಕೆಗೆ ಸಿಲುಕದಂತಾಗಿದೆ. ದಪ್ಪ ಅಕ್ಷರದಲ್ಲಿ ಮುದ್ರಣ ವಾಗದಿರುವುದು ಪುಸ್ತಕದ ಮುಖ್ಯ ದೋಷವಾಗಿ ಕಂಡುಬರುತ್ತದೆ.

ಒಟ್ಟು 58 ಗೀತಗಳಿರುವ ಈ ಪುಸ್ತಕ ಮಕ್ಕಳ ಸಾಹಿತ್ಯಕ್ಕೆ ಉತ್ತಮ ಕಿರು ಕಾಣಿಕೆಯಾಗಿದ್ದು ಒಟ್ಟಾರೆಯಾಗಿ ಲೇಖಕರು ಅಭಿನಂದನೆಗೆ ಪಾತ್ರರಾಗಿದ್ದಾರೆ.

—ಡಿ. ವಿ. ಪರಮಶಿವಮೂರ್ತಿ

---

ಮಕ್ಕಳ ಲೋಕ : ಲೇಖಕರು–ಶಿವರಾಮ ಹೆಗಡೆ, ಬಾಳೆಗದ್ದೆ. ಪ್ರಕಾಶಕರು ಎಂ.ವಿ. ಹೆಗಡೆ. ಇಡಗುಂಜಿ. ಆಕೃತಿ : ಕ್ರೌನ್ 1/8, ಪುಟಗಳು : 42. ಬೆಲೆ : ರೂ. 8-00 (1992)

# ವಸ್ತು ಸಂಗ್ರಹ

## 61ನೆಯ ಕನ್ನಡ ಸಾಹಿತ್ಯ ಸಮ್ಮೇಳನ

ಜನವರಿ 9, 10, 11 ಮತ್ತು 12ರಂದು ದಾವಣಗೆರೆಯಲ್ಲಿ ಅದ್ದೂರಿಯಾಗಿ ನಡೆದ 61ನೇ ಅಖಿಲಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಡಾ॥ ಜಿ. ಎಸ್. ಶಿವರುದ್ರಪ್ಪ ಅವರು ಆಯ್ಕೆಯಾಗಿದ್ದುದು ಸಮ್ಮೇಳನಕ್ಕೆ ಹೆಚ್ಚಿನ ಮೆರುಗನ್ನು ತಂದಿತ್ತು. ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯನವರ ಅಧ್ಯಕ್ಷತೆಯ ಅವಧಿಯಲ್ಲಿ ನಡೆದ ಈ ಸಮ್ಮೇಳನ ಸ್ಥಳೀಯ ಸ್ವಾಗತ ಸಮಿತಿಯ ಅಚ್ಚುಕಟ್ಟಾದ ವ್ಯವಸ್ಥೆಯಲ್ಲಿ ಯಶಸ್ವಿಯಾಯಿತು. ಎಂದಿಗಿಂತ ಪುಸ್ತಕ ಮಾರಾಟ ದಾಖಲೆಯಾಗಿತ್ತು. ಸುಮಾರು 9-10 ವಿವಿಧ ಗೋಷ್ಠಿಗಳಲ್ಲಿ ಸಾಹಿತ್ಯದ ಹಲವಾರು ವಿಷಯಗಳು ಚರ್ಚೆಯಾದವು. ಹೊಸ ಸಂಶೋಧನೆಗಳಿಗಾಗಿಯೇ ಒಂದು ಪ್ರತ್ಯೇಕ ಗೋಷ್ಠಿಯಿದ್ದುದು ಮತ್ತು ರಾತ್ರಿ ವೇಳೆ ಮೂರು ದಿನವೂ 'ಸಾಹಿತ್ಯ ಸಂವಾದ'ಗಳನ್ನು ನಡೆಸಿದ್ದು ಈ ಬಾರಿಯ ಸಮ್ಮೇಳನದ ವೈಶಿಷ್ಟ್ಯವಾಗಿತ್ತು.

ಸಮ್ಮೇಳನಾಧ್ಯಕ್ಷರಾದ ಡಾ॥ ಜಿ.ಎಸ್.ಎಸ್. ಅವರು ಅತ್ಯಂತ ಮೌಲಿಕವಾದ ಅಧ್ಯಕ್ಷ ಭಾಷಣವನ್ನು ನೀಡಿದರು. 'ಹಿಂದಣ ಹೆಜ್ಜೆಯನರಿತಲ್ಲದೆ ನಿಂದಹೆಜ್ಜೆಯ ನರಿಯಬಾರದು' ಎಂಬ ಕವಿವಾಣಿಗೆ ಅನುಗುಣವಾಗಿ ಸಮ್ಮೇಳನಾಧ್ಯಕ್ಷರ ಭಾಷಣ ಚರ್ವಿತ ಚರ್ವಣವಾಗದಿರುವಂತೆ ಎಚ್ಚರವಹಿಸಿದ್ದಾರೆ. ಹಿಂದಿನ ಭಾಷಣಗಳಲ್ಲಿ ಪ್ರಧಾನವಾಗಿ ಉಲ್ಲೇಖವಾಗಿರುವ ಕನ್ನಡ ನಾಡು-ನುಡಿಗೆ ಸಂಬಂಧಿಸಿದ ವಿಷಯ ಗಳನ್ನು ನೆನಪಿಸಿ ಪ್ರಸ್ತುತ ಸಮಸ್ಯೆಗಳೊಂದಿಗೆ ಹಿಂದಿನವೂ ಜೀವಂತವಾಗಿರುವುದನ್ನು ಉಲ್ಲೇಖಿಸಿ ದೃಢವಾದ ರಾಜಕೀಯ ಸಂಕಲ್ಪದ ಅಭಾವವನ್ನೂ ಒತ್ತಿ ಹೇಳಿದರು. ಕನ್ನಡ ಸಾಹಿತ್ಯ ಪ್ರಸ್ತುತ ಎದುರಿಸುತ್ತಿರುವ ಸಮಸ್ಯೆಗಳತ್ತ ಬೆಳಕು ಚೆಲ್ಲಿದ ಅಧ್ಯಕ್ಷರು ಸಾಹಿತ್ಯ ಬೆಳವಣಿಗೆಗೆ ಪೂರಕವಾದ ಕನ್ನಡ ಸಂಸ್ಕೃತಿಯ ದುಃಸ್ಥಿತಿಯ ಬಗೆಗೂ ಕಳವಳ ವ್ಯಕ್ತಪಡಿಸಿ ಅದರ ನಿವಾರಣೆಗೆ ಪ್ರಜ್ಞಾವಂತ ಸಾಹಿತಿಗಳು-ವಿಮರ್ಶಕರು ತೊಡಗ ಬೇಕೆಂದು ಕರೆಕೊಟ್ಟರು.

[ಭಾಮಿನೀಷಟ್ಪದಿಯಲ್ಲಿ ಕಾವ್ಯರಚನೆ ಮಾಡುವಾಗಿನ ನಿಯಮವನ್ನು ವಿವರಿಸುವುದು ಈ ಪದ್ಯದ ಉದ್ದೇಶ. ವಾಚ್ಯಾರ್ಥದಲ್ಲಿ ಹಾಗೆ ತೋರುವುದಿಲ್ಲ. ಭಾಮಿನೀ (ಹೆಣ್ಣು) ಹುಚ್ಚು ಹಿಡಿದಾತನೊಬ್ಬನಿಗೆ 'ಮಾತ್ರೆ'ಗಳನ್ನು ಕೊಡಬೇಕಾದ ಕ್ರಮವನ್ನೂ, (ಪಾದಾಂತ್ಯದಲ್ಲಿ ಗುರು ಬರಬೇಕೆಂಬುದನ್ನು) 'ಕೊನೆಗೆ ಗುರುಕೃಪೆಯಿರಲು ಬದುಕುವನು' ಎಂದು ನಗೆಯಾಡುತ್ತಲೇ ಶ್ಲೇಷಾರ್ಥದಲ್ಲಿ ಪದ್ಯ ತನ್ನ ಉದ್ದೇಶವನ್ನು ಸಾಧಿಸಿಕೊಳ್ಳುತ್ತದೆ]

ಛಂದಸ್ಸು ಬೆಳೆದು ಬಂದ ಬಗೆಯನ್ನು ಆಯಾ ಛಂದಸ್ಸಿನಲ್ಲೇ ಬರೆದಿರುವ ಪದ್ಯಗಳ ಮೂಲಕ ತೆರೆದಿಟ್ಟಿರುವ 'ಛಂದೋಮಿತ್ರ' ಮೇಲ್ಮಟ್ಟದ ಹಾಸ್ಯಪ್ರಜ್ಞೆ, ಉಕ್ತಿಚಾತುರ್ಯ, ಕವಿಹೃದಯದ ಮಿಡಿತ, ತಿಳಿಸಿಹೇಳುವ ಅದಮ್ಯ ಆಕಾಂಕ್ಷೆ, ಲಾಲಿತ್ಯ ತುಂಬಿದ ಸುಭಗ ನಿರೂಪಣಾಕ್ರಮ ಈ ಎಲ್ಲ ಧಾತುಗಳನ್ನೂ ಮೈಗೂಡಿಸಿಕೊಂಡು ಜನ್ಮ ತಾಳಿದೆ. ಸಾಹಿತ್ಯಾಸಕ್ತರ ಪಾಲಿಗೆ 'ಛಂದೋಮಿತ್ರ' ಒಂದು ರಸಕೋಶ; ನಾಮೋದ್ಯಾನ; ರಮ್ಯಾರಣ್ಯ. ಛಂದೋಮಿತ್ರ ಗಳಿಸಿರುವ ಮೆಚ್ಚುಗೆಗಳಿಗೆ ಮೇರುಪ್ರಾಯವಾದದ್ದು ಪ್ರೊ. ಎಸ್.ಕೆ. ರಾಮಚಂದ್ರರಾಯರ ನುಡಿಮುತ್ತುಗಳು–

'ಛಂದಸ್ಸೆಂದರೆ ನನಗೆ ದಿಗಿಲು; ಭುಸ್ಸೆಂದು ಮೇಲೆಲ್ಲಿ ಎರಗೀತೋ ಎಂದು ಭಯ. ಅದನ್ನು (ಛಂದಸ್ಸನ್ನು) ಅರ್ಥಮಾಡಿಕೊಳ್ಳಬೇಕೆಂದು ಪ್ರಯತ್ನಿಸಿ ಸೋತು ಸೊರಗಿದ್ದೇನೆ. ಆದರೆ ('ಛಂದೋಮಿತ್ರ') ಓದಿ ತಿರುವುತ್ತಿದ್ದಂತೆ ಛಂದಃಶಾಸ್ತ್ರದ ವಿಚಾರವಾಗಿ ನನಗಿದ್ದ ಭಯ, ದ್ವೇಷ, ಜುಗುಪ್ಸೆ ಸಡಲಿಹೋದವು. ತಮ್ಮ ರಚನೆಗಳನ್ನು ಓದಿ ಸವಿಯುತ್ತಲೇ ಛಂದಸ್ಸಿನ ಸ್ವಾರಸ್ಯವನ್ನು ಗುರುತಿಸುವ ಯತ್ನ ಮಾಡಿದೆ. ತಾವು ಅನುಸರಿಸಿರುವ ಸಂವಿಧಾನವಂತೂ ಅಪೂರ್ವವಾದುದು. ಇತರ ಶಾಸ್ತ್ರಗಳವರೂ ಇದೇ ಕ್ರಮವನ್ನು ಹಿಡಿದರೆ ಆಗದೆ? ತಮ್ಮ ಪುಸ್ತಕ ಇತರರಿಗೊಂದು ಸವಾಲು. ಒಳನಗೆಯ ಲಘುಶೈಲಿ ಎಂದು ತಾವೆಂದಿರುವುದು ನೂರಕ್ಕೆ ನೂರು ಭಾಗ ದಿಟ. ಪುಸ್ತಕದ ರಸಭಾಗವೆ ಇದು. ಕಡಲೆಯೇನೋ ಕಬ್ಬಿಣದ್ದೆ. ಆದರೆ ಅದನ್ನು ಕರಗಿಸಿ, ಅದಕ್ಕೆ ಕೊಡಗಿನ ಜೇನನ್ನು ಬೆರಸಿ ಉಣಬಡಿಸಿದ್ದೀರಿ. ಜೇನಿನ ಸಿಹಿ ಕಬ್ಬಿಣವನ್ನೂ ಸವಿಯಾಗಿಸಿದೆ'

ಶರಷಟ್ಪದಿಯಲ್ಲಿ ರಚನೆಯ ಹಾದಿಯನ್ನು ತೋರಿಸುವ ಪದ್ಯವೊಂದರಲ್ಲಿ ಮಿತ್ರರು–

'ನಿದ್ದೆಯು ಬರದಿರೆ
ಓದಿರಿ ನನ್ನಯ
ಛಂದದ ಗ್ರಂಥವ ಮರೆಯದಲೇ
ಭದ್ರದಿ ನಿದ್ರೆಯು
ಬಂದೇ ಬರುವುದು
ಒಂದು ಪುಟವು ಮುಗಿವಷ್ಟರೊಳೇ'

ಎಂದು ಹೇಳುತ್ತಾರೆ. ಇದೇನಿದ್ದರೂ ಮಿತ್ರರ ವಿನಯವಂತಿಕೆಯ ಮಾತಷ್ಟೆ. ನಿಜದಲ್ಲಿ 'ಛಂದೋಮಿತ್ರ' ನಿದ್ದೆ ಬರಿಸುವ ಕೃತಿಯಲ್ಲ; ನಿದ್ದೆಯಲ್ಲಿರುವವರನ್ನು ಎಚ್ಚರಿಸುವ ಕೃತಿ. ಪ್ರೊ. ರಾಮಚಂದ್ರರಾಯರು ಹೇಳುವಂತೆ 'ಛಂದಸ್ಸಿನ ಜಟಿಲವಾದ ವ್ಯಾಖ್ಯಮದಲ್ಲೂ ರಸವತ್ತಾದ ಬರಹ ಸಾಧ್ಯ ಎಂಬುದನ್ನು ಮನವರಿಕೆ ಮಾಡಿಕೊಡುವ ಕೃತಿ.

ಮಿತ್ರರು ಬರೆಯಲುದ್ದೇಶಿಸಿರುವ 'ವ್ಯಾಕರಣ ಮಿತ್ರ' ಎಂಬ ಕೃತಿ ಬೇಗ ಹೊರಬಂದು ಶಾಸ್ತ್ರಸಾಹಿತ್ಯ ಪ್ರಿಯರನ್ನು ತಣಿಸಲಿ ರಂಜಿಸಲಿ ಎಂದು 'ಛಂದೋಮಿತ್ರ'ವನ್ನೋದಿ ಸಂತೋಷಪಟ್ಟವರು ತುಂಬು ಮನಸ್ಸಿನಿಂದ ಹಾರೈಸುತ್ತಾರೆ.

–ಎಂ. ಕೆ. ಗೋಪಿನಾಥ್

---

'ಛಂದೋಮಿತ್ರ'ದ ಮೊದಲ ಮುದ್ರಣದ 2000 ಪ್ರತಿಗಳು ಖರ್ಚಾಗಿದ್ದು, ಕೃತಿಯ ಎರಡನೇ ಆವೃತ್ತಿ ಸದ್ಯದಲ್ಲಿಯೇ ಹೊರಬರಲಿದೆ.

## ಗಮಕ ಸಮಾಸ *

ಶ್ರೀ ಸೇಡಿಯಾಪು ಕೃಷ್ಣಭಟ್ಟರು ಕನ್ನಡ ವಿದ್ವಲ್ಲೋಕಕ್ಕೆ ಸುಪರಿಚಿತರು, ಉತ್ತಮ ಕವಿಗಳು. ಉಚ್ಚಶ್ರೇಣಿಯ ವಿಮರ್ಶಕರು. ವಿಶೇಷವಾಗಿ ಛಂದಸ್ಸು, ವ್ಯಾಕರಣಾದಿ ಶಾಸ್ತ್ರಗಳಲ್ಲಿ ತಳಮುಟ್ಟಿದ ಪಾಂಡಿತ್ಯ ಉಳ್ಳವರು. ಅಲ್ಲದೆ ಸ್ವತಂತ್ರ ಚಿಂತನ ಪ್ರವೃತ್ತಿಯವರು. ಇಂತಹ ಒಬ್ಬ ಘನವಿದ್ವಾಂಸರು ಬರೆವ ಗ್ರಂಥಕ್ಕೆ 'ವಿಮರ್ಶೆ' ಎನ್ನುವುದು ಶಬ್ದವಾಗದು. ಗ್ರಂಥವನ್ನು ಕುರಿತು 'ಅಭಿಪ್ರಾಯ' ಎಂಬ ಶಬ್ದವನ್ನು ಬಳಸಬಹುದೆಂದು ತೋರುತ್ತದೆ.

ಕೇಶಿರಾಜನು ಶಬ್ದಮಣಿದರ್ಪಣದಲ್ಲಿ ಹೇಳಿದ 'ಗಮಕ ಸಮಾಸ' ಎಂಬ ಒಂದು ಸಂಗತಿ, ವಿದ್ವಾಂಸರ ಹಲವಾರು ಊಹಾಪೋಹಗಳಿಗೆ ಕಾರಣವಾಗಿ ಒಂದು ಸಮಸ್ಯೆಯ ರೂಪವನ್ನು ತಳೆದುಬಿಟ್ಟಿದೆ. ಇದರ ಮೇಲೆ ಉಪನ್ಯಾಸಗಳೂ ನಡೆದಿವೆ. ಪ್ರಬಂಧಗಳೂ ಬಂದಿವೆ. ಆದರೆ ಸರ್ವಸಮ್ಮತವಾಗಬಲ್ಲ ಒಂದು ಅಭಿಪ್ರಾಯ ಮೂಡಲಿಲ್ಲ. ಈ ಸಮಸ್ಯೆಯನ್ನು ಬಿಡಿಸುವುದಕ್ಕಾಗಿ ಶ್ರೀ ಸೇಡಿಯಾಪು ಅವರು ಮಾಡಿರುವ ಒಂದು ಸ್ತುತ್ಯವಾದ ಪ್ರಯತ್ನ ಈ 'ಗಮಕಸಮಾಸ'. ಇದರಲ್ಲಿ

---

*ಲೇ. ಶ್ರೀ ಸೇಡಿಯಾಪು ಕೃಷ್ಣಭಟ್ಟರು, ಪ್ರಕಾಶನ : ವಿ.ಸೀ. ಸಂಪದ (ವಿ.ಸೀ. ಸಂಸ್ಮರಣ ವೇದಿಕೆ) ಅಶೋಕನಗರ, ಬೆಂಗಳೂರು-೫೦ ಪುಟ : ೪೮; ಬೆಲೆ : ರೂ. ೬-೦೦

ಗಾಢವಾದ ಚಿಂತನವಿದೆ. ಪಾಂಡಿತ್ಯಪೂರ್ಣವಾದ ವಿಚಾರವಿದೆ. ವಿಚಾರಕ್ಕೆ ಒಂದು ಹೊಸ ಬೆಳಕನ್ನು ಗ್ರಂಥಕರ್ತರು ನೀಡಿದ್ದಾರೆ. ಒಂದೇ ಮಾತಲ್ಲಿ ಹೇಳಬೇಕಾದರೆ ಪಂಡಿತರು ಮನನ ಮಾಡಬೇಕಾದ ಒಂದು ಉತ್ತಮ ಪ್ರಬಂಧವಿದು.

ಭಿನ್ನರುಚಿಗಳಿರುವಂತೆ ಭಿನ್ನಾಭಿಪ್ರಾಯಗಳೂ ಇರಬಹುದಷ್ಟೆ. ಇವು ಇನ್ನೂ ಹೆಚ್ಚಿನ ವಿಚಾರಕ್ಕೆ ಉಪಯುಕ್ತವಾದಾವು–ಎಂಬ ನಂಬಿಕೆಯಿಂದ ಶಂಕಾರೂಪವಾದ ಕೆಲವು ಅಭಿಪ್ರಾಯಗಳನ್ನು ಸಂಕ್ಷೇಪವಾಗಿ ತಿಳಿಸುತ್ತೇನೆ. ಇವು ಕೇವಲ ಜಿಜ್ಞಾಸೆಗಾಗಿ ಉದ್ಭವಿಸಿದವು. ಖಂಡನ–ಮಂಡನಗಳ ಗಂಧವನ್ನು ಇವಕ್ಕೆ ಲೇಪಿಸಬಾರದೆಂದು ಪ್ರಾರ್ಥನೆ,

೧. 'ಇದಂ ಪುಸ್ತಕಂ ಮಮ' ಎಂಬ ವಾಕ್ಯವನ್ನು ಪದಗಳ ಅನುಕ್ರಮದಂತೆ ಕನ್ನಡದಲ್ಲಿ ಭಾಷಾಂತರಿಸಿದರೆ ಅದು 'ಇದು ಪುಸ್ತಕ ನನ್ನ' ಎಂದಾಗಿ ಅರ್ಥಹೀನವಾಗುತ್ತದೆ....ಹೀಗಾಗಲು ಕಾರಣವೇನೆಂದರೆ, ನಾವು ಕನ್ನಡದಲ್ಲಿ ಪ್ರಯೋಗಿಸುವ' ನನ್ನ, ಮತ್ತು 'ನನ್ನದು' ಎಂಬ ಎರಡು ಅರ್ಥಗಳನ್ನು ಸಂಸ್ಕೃತದ 'ಮಮ' ಎಂಬ ಒಂದೇ ಪದರೂಪವು ತಿಳಿಸಲು ಸಮರ್ಥವಾಗಿರುವುದಾಗಿದೆ (ಪುಟ–೨೫).

ಈ ಮಾತು ಸರಿಯಲ್ಲವೆಂದು ನನ್ನ ಅಭಿಪ್ರಾಯ. 'ಮಮ' ಎಂಬುದು 'ನನ್ನದು' ಎಂಬ ಅರ್ಥವನ್ನು ಸೂಚಿಸಲು ಸಮರ್ಥವಲ್ಲ. ಆಗ 'ಮದೀಯಂ' ಎಂದೇ ಹೇಳಬೇಕು. ಸಂಸ್ಕೃತದಲ್ಲಿ ಆಗಲೂ ಸಹ 'ಇದಂ ಮದೀಯಂ ಪುಸ್ತಕಂ' 'ಇದಂ ಪುಸ್ತಕಂ ಮದೀಯಂ' 'ಮದೀಯಂ ಪುಸ್ತಕಮಿದಂ'–ಹೀಗೆ ನಾನಾ ವಿಧವಾಗಿ ಹೇಳಲಾಗುತ್ತದೆ. ಕನ್ನಡದಲ್ಲಿ 'ಇದು ನನ್ನದು ಪುಸ್ತಕ' ಎಂದೋ 'ಇದು ಪುಸ್ತಕ ನನ್ನದು' ಎಂದೋ ಪ್ರಯೋಗಿಸುವುದು ಸರಿಯೆನಿಸದು,

ಇದು ಪುಸ್ತಕ ನನ್ನ–ಎಂಬ ಪ್ರಯೋಗವು ಗದ್ಯದಲ್ಲಿ ಅನುಚಿತವೆನಿಸಿದರೂ ಪದ್ಯದಲ್ಲಿ ಉಚಿತವೇ ಆದೀತು. 'ಅಳವಲ್ಲೀ ಸ್ತುತಿಯೆನ್ನ' ಎಂದು ಜಗನ್ನಾಥ ಕವಿಯ ಪ್ರಯೋಗವಿರುವುದನ್ನು ಶ್ರೀ ಸೇಡಿಯಾಪು ಅವರೇ ಉದಾಹರಿಸಿದ್ದಾರೆ. ಆದ್ದರಿಂದ ಈ ಸಂಗತಿ ಕಾವ್ಯ ಮೀಮಾಂಸೆಗೆ ಸಂಬಂಧಿಸಿದ್ದೇ ಹೊರತು ವ್ಯಾಕರಣ ಶಾಸ್ತ್ರಕ್ಕೆ ಸಂಬಂಧಿಸಿದ್ದಲ್ಲ. ಯಾವ ಶಬ್ದವಾದ ಮೇಲೆ ಯಾವ ಶಬ್ದವನ್ನು ಹೇಳಬೇಕೆಂದು ಕನ್ನಡ ವ್ಯಾಕರಣವು ನಿಯಮಿಸಿಲ್ಲ. 'ಅವನು ಹಳ್ಳಿಗೆ ಬಂದನು' 'ಹಳ್ಳಿಗೆ ಅವನು ಬಂದನು' 'ಬಂದನು ಅವನು ಹಳ್ಳಿಗೆ' ಈ ರೀತಿಯಲ್ಲಿ ಪ್ರಯೋಗಿಸಬಹುದಷ್ಟೆ.

೨. 'ಪಕ್ಷಿಯ ರೆಕ್ಕೆ' ಎಂಬುದು ಸಮಾಸವಲ್ಲವೆಂದೂ 'ಒಕ್ಕೆಯ ಭಾಷೆ' ಎಂಬುದು ಸಮಾಸವೆಂದೂ ಭಾವಿಸುವುದು ಸರಿಯೆಂದು ಹೇಳುವುದಕ್ಕಾದೀತೆ ?' ಎಂಬ ಪ್ರಶ್ನೆಯನ್ನು ಎತ್ತಿದ್ದಾರೆ. (ಪುಟ–೨೮)

ಪಕ್ಷಿ ಎಂಬ ಮೂಲ ಪ್ರಾತಿಪದಿಕವಿರುವಂತೆ 'ಒಕ್ಕೆ' ಎಂಬ ಪ್ರಾತಿಪದಿಕ ಉಂಟೇನು ? ಇದ್ದಿದ್ದರೆ ಈ ಶಂಕೆಗೆ ಉತ್ಥಿತಿಯಾದರೂ ಇರುತ್ತಿತ್ತು. ಇದ್ದಿದ್ದರೂ

'ಒಳ್ಳೆಯು' ಎಂಬುದು ಷಷ್ಠ್ಯಂತವಾಗುವ ಸಂಭವವೇ ಇಲ್ಲ. ವಿಶೇಷಣ ವಿಶೇಷ್ಯಗಳಿಗೆ ಸಾಮಾನಾಧಿಕರಣ್ಯವಿದ್ದಾಗ (ಅಭೇದಾನ್ವಯವಿದ್ದಾಗ) ಷಷ್ಠಿಗೆ ಅವಕಾಶವಿಲ್ಲ. ಭೇದವಿದ್ದರೆ ಮಾತ್ರ ಷಷ್ಠಿಗೆ ಪ್ರಾಪ್ತಿ. 'ಒಳ್ಳೆಯು ಭಾಷೆ' 'ಬಿಳಿಯು ಬಟ್ಟೆ' ಮುಂತಾದ ಸ್ಥಳದಲ್ಲಿ ಅಭೇದಾನ್ವಯವೇ ಇರುತ್ತದೆ. ಇದು ಗುಣವಿಶಿಷ್ಟವಾದ ಗುಣಿವಾಚಕ ಶಬ್ದ.

೩. ಪಂಪನ 'ನೆನೆಯದಿರಣ್ಣ' ಎಂಬ ಪದ್ಯದಲ್ಲಿ 'ಕರ್ಣನಳವಂಕದ, ಕರ್ಣನ ಚಾಗವೆಂದು' ಎಂಬ ಸ್ಥಳದಲ್ಲಿ ಪೂರ್ವಾಪರಪದಗಳ ಅನ್ವಯವು 'ಅಂಕದ ಕರ್ಣನ ಅಳವು' ಎಂದಾಗಿದೆ ಹೊರತು ಮುಂದಿರುವ 'ಕರ್ಣನ ಚಾಗ' ಎಂಬುದಕ್ಕೆ 'ಅಂಕದ' ಎಂಬುದು (ಅಂಕ–ಕಾಳಗ) ಅನ್ವಯಿಸುವಂತಹುದಲ್ಲ (ಪುಟ–೨೭).

ಅಳವು (ಪರಾಕ್ರಮ) ಕಾಳಗದಲ್ಲಿ ತೋರಬೇಕಾದ್ದರಿಂದ ಈ ಪ್ರಕಾರ ಅನ್ವಯಿಸಬೇಕೆಂದು ಮಾನ್ಯ ವಿದ್ವಾಂಸರ ಆಶಯವಾಗಿರಬೇಕು. ಆದರೆ ಅಂಕದ ಕರ್ಣ, ಕಲಿಪಾರ್ಥ–ಮುಂತಾದ ಶಬ್ದಗಳ ಒಂದು ಆನುಪೂರ್ವಿ ಕವಿ ಪರಂಪರೆಯಲ್ಲಿ ಬಂದಿದೆ. ಅದೊಂದು ಬಿರುದಿನಂತೆ ಕವಿಗಳು ಬಳಸುತ್ತಾರೆ. 'ಅಂಕದ ಕರ್ಣನ ಚಾಗ' ಎಂದು ಅನ್ವಯಿಸುವುದೇ ಸಮಂಜಸವೆಂದು ನನ್ನ ನಮ್ರವಾದ ಸೂಚನೆ. ಅಳವು ಕಾಳಗದಲ್ಲಿಯೇ ತೋರಬೇಕಾದದ್ದು. 'ಅಂಕದ' ಎನ್ನುವುದಕ್ಕೆ ಆಗ ಅರ್ಥ ಪುಷ್ಟಿ ಇಲ್ಲ. ಚಾಗ–ತ್ಯಾಗ–ದಾನ ಎಂಬುದು ಮಾತ್ರ ಸಮಯ ವಿಶೇಷದಲ್ಲಿ ಅಭಿವ್ಯಕ್ತವಾಗುವ ಗುಣ. ಕಾಳಗವು ಅದಕ್ಕೆ ಸಮಯವಲ್ಲ. ಕರ್ಣನಾದರೋ ಕಾಳಗದ ಸಮಯದಲ್ಲಿಯೂ ಕವಚ ಕುಂಡಲಗಳನ್ನರ್ಪಿಸಿದ ದಾನಶೂರ–ಎಂದು ಕವಿಯ ಅಭಿಪ್ರಾಯವಾಗುವುದರಿಂದ, 'ಅಂಕದ ಕರ್ಣನ ಚಾಗ' ಎಂದು ಅನ್ವಯಿಸಿದರೇ ಹೆಚ್ಚಾದ ಅರ್ಥ ಪುಷ್ಟಿಯುಂಟು.

೪. ಇಪ್ಪತ್ತ ನಾಲ್ಕು, ನೂರ ಹತ್ತು–ಮುಂತಾದ ಕಡೆ ಪೂರ್ವಪದದಲ್ಲಿ ಷಷ್ಠೀವಿಭಕ್ತಿಯಿದ್ದ ವ್ಯಧಿಕರಣ ಸಮಾಸವೆಂದು ಗ್ರಂಥಕರ್ತರು ಹೇಳಿರುವುದು ಯುಕ್ತವೇ ಹೌದು. ಆದರೆ ಈ ಷಷ್ಠೀವಿಭಕ್ತಿಯು ಪದಕ್ಕೆ ಎಲ್ಲಿ ಅನ್ವಯವೆಂಬುದು ಸ್ಪಷ್ಟವಾಗಿಲ್ಲ. ಅದು ಉತ್ತರ ಪದವಾದ ನಾಲ್ಕು ಹತ್ತು–ಎಂಬುದರೊಡನೆ ಎಂದಿಗೂ ನೇರವಾಗಿ ಅನ್ವಯಿಸತಕ್ಕದ್ದಲ್ಲ. ಕಥಂಚಿತ್ ಅನ್ವಯ ಮಾಡಿದರೂ ಇಪ್ಪತ್ತರ ಒಂದಂಶವಾದ ನಾಲ್ಕು. ನೂರರ ಒಂದಂಶವಾದ ಹತ್ತು–ಎಂದು ಅರ್ಥವಾದೀತೇ ಹೊರತು. ವಿವಕ್ಷಿತವಾದ ಅರ್ಥ ಬರುವುದಿಲ್ಲ. ಇಪ್ಪತ್ತರ ಮೇಲೆ ನಾಲ್ಕು. ನೂರರ ಮೇಲೆ ಹತ್ತು–ಎಂಬ ಅರ್ಥ ಇಲ್ಲಿ ವಿವಕ್ಷಿತ 'ಮೇಲೆ' ಎಂಬ ಶಬ್ದವು ಇಲ್ಲಿ ಲುಪ್ತವಾಗಿದೆಯೆಂದೂ ಇದು ಮಧ್ಯಮ ಪದಲೋಪಿ ಸಮಾಸವೆಂದೂ ಹೇಳುವುದು ಅನಿವಾರ್ಯ. ಸೊರಬ ಪ್ರಾಂತದಲ್ಲಿ ರೈತರು ಬತ್ತವನ್ನಳೆಯುವಾಗ ಇಪ್ಪತ್ತರ ಮೇಲೊಂದು. ಇಪ್ಪತ್ತರ ಮೇಲೆರಡು–ಎಂದೇ ಹೇಳುತ್ತಾರೆ.

ಸಮ್ಮೇಳನದ ನಂತರ ಬಹಿರಂಗ ಅಧಿವೇಶನದಲ್ಲಿ ಎಂದಿನಂತೆ ಹತ್ತು-ಹಲವು ಕನ್ನಡಪರ ನಿರ್ಣಯಗಳನ್ನು ಕೈಗೊಳ್ಳಲಾಯಿತು. ಈ ನಿರ್ಣಯಗಳು ಕೇವಲ ನಿರ್ಣಯಗಳಾಗಿ ಉಳಿಯದೆ ಕಾರ್ಯರೂಪಕ್ಕೆ ತರುವಂಥ ಕ್ರಿಯಾಶೀಲ ಪ್ರಯತ್ನ ಆಗ ದಿದ್ದರೆ ಏನೂ ಪ್ರಯೋಜನವಾಗದು ಎಂಬ ಮಾತನ್ನು ಹಿಂದಿನ ಸಂಚಿಕೆಗಳಂತೆಯೇ ಲೋಚನ ಇಲ್ಲಿಯೂ ಪುನರಾವರ್ತಿಸುತ್ತದೆ.

## ಕವಿಸ್ಮಾರಕಗಳು

ಇತ್ತೀಚೆಗೆ ಪ್ರಜಾವಾಣಿಯಲ್ಲಿ 'ಅಭಿನವ ಕಾಳಿದಾಸ' ಎಂಬ ಹೆಗ್ಗಳಿಕೆಗೆ ಪಾತ್ರ ರಾದ 'ಬಸವಪ್ಪಶಾಸ್ತ್ರಿಗಳ ಸಮಾಧಿ'ಯ ದುಃಸ್ಥಿತಿಯ ಬಗ್ಗೆ ವಿವರಪೂರ್ಣ ಲೇಖನ ವೊಂದು ಬಂದಿತ್ತು. ಬೆಂಗಳೂರಿನ ಆಸುಪಾಸಿನಲ್ಲೇ ಇರುವ ಈ ಸಮಾಧಿ ಯಾರ ಅರಿವಿಗೂ ಬರದೆ ಹೀನಾಯ ಸ್ಥಿತಿಗೆ ತಲುಪಿರುವ ಬಗ್ಗೆ ಲೇಖಕರು ಕಳವಳ ವ್ಯಕ್ತ ಪಡಿಸಿ ಷೇಕ್ಸ್‌ಪಿಯರ್ ಹುಟ್ಟಿದ ಮನೆ, ಲಾರೆನ್ಸ್ ಮನೆ, ಟಾಲ್‌ಸ್ಟಾಯ್ ಊರು ಗಳು ವಿದೇಶಗಳಲ್ಲಿ ಜೀವಂತ ಸ್ಮಾರಕಗಳಾಗಿ ಸದಾ ಅವರ ಸಾಧನೆಯ ಸ್ವರೂಪವನ್ನು, ಪ್ರವಾಸಿಗರಲ್ಲಷ್ಟೇ ಅಲ್ಲ–ನವಪೀಳಿಗೆಯಲ್ಲಿ ತಮ್ಮ ಸಂಸ್ಕೃತಿಯ ಬಗ್ಗೆ ಹೆಮ್ಮೆ ಮೂಡಿ ಸುವ ವಾತಾವರಣ ಸೃಷ್ಟಿಸುತ್ತಿವೆ. ನಮ್ಮಲ್ಲಿ ಇಂಥ ವಾತಾವರಣ ನಿರ್ಮಿತಿ ಯಾವಾಗ ? ಎಂದು ಪ್ರಶ್ನಿಸಿದ್ದಾರೆ.

ಕನ್ನಡ ನಾಡು-ನುಡಿಗಾಗಿ ತಮ್ಮ ಬದುಕನ್ನೇ ಸವೆಸಿದ ಇಂಥ ಇನ್ನೂ ಎಷ್ಟೋ ಜನ ಕವಿ-ಸಾಹಿತಿ-ಗಣ್ಯರ ಸ್ಥಳಗಳನ್ನು ನಾವು ಪ್ರವಾಸೀ ತಾಣವಾಗಿ ಪರಿವರ್ತಿಸ ಬೇಕಾಗಿದೆ. ಬದಲಾಗುತ್ತಿರುವ ಇಂದಿನ ಸಮಾಜದಲ್ಲಿ ಇಂಥ ಸಂಸ್ಕೃತಿ ಉಳಿಸುವ ಪ್ರಯತ್ನಗಳಾಗದಿದ್ದರೆ, ನಮ್ಮ ನಾಡು–ನುಡಿಯನ್ನು ಕಟ್ಟಿದ ಮಹನೀಯರನ್ನು ನಾವು ವ್ಯವಸ್ಥಿತವಾಗಿ ಪರಿಚಯಿಸದಿದ್ದರೆ ನಮ್ಮ ನವಪೀಳಿಗೆ ಸಂಸ್ಕೃತಿ ಹೀನವಾಗು ತ್ತದೆ. ಟಿ.ಪಿ. ಅವರ ಮನೆ, ಕೈಲಾಸಂ ಮನೆಗಳು ಇಂದು ಗುರುತಿಸಲಾಗದಂತೆ ಬದಲಾಗಿವೆ. ಬೇಂದ್ರೆ, ಮಾಸ್ತಿ, ಎ.ಆರ್.ಕೃ. ಇನ್ನೂ ಮುಂತಾದವರ ವಾಸಸ್ಥಳ ಗಳನ್ನು ಅವರ ಜೀವನ–ಸಾಧನೆ–ವ್ಯಕ್ತಿತ್ವದ ದರ್ಶನವಾಗುವಂಥ ಪ್ರದರ್ಶನಾಲಯ ಗಳನ್ನಾಗಿ ಮಾಡಬೇಕಾಗಿದೆ. ವೆಂಕಣ್ಣಯ್ಯನವರ ಊರು ತಳುಕಿನಲ್ಲಿ. ಬಿ.ಎಂ.ಶ್ರೀ ಊರು ಬೆಳ್ಳೂರಿನಲ್ಲಿ. ಎ.ಆರ್.ಕೃ ಅವರ ಊರು ಅಂಬಳೆಯಲ್ಲಿ ಅವರ ಸ್ಮಾರಕ ಮಂದಿರಗಳಾಗಿವೆಯಾದರೂ ಅವು ಪ್ರದರ್ಶನಾಲಯಗಳಾಗಿಲ್ಲ. ಈ ಮಹನೀಯರು ಗಳು ನಾಡಿನ ಆಸ್ತಿ. ಅವರ ಹೆಸರು–ಸಾಧನೆಗಳನ್ನು ಉಳಿಸುವುದು ಈ ನಾಡನ್ನಾ ಳುವ ಸರ್ಕಾರದ ಕರ್ತವ್ಯವಾಗಬೇಕು. ಅವರುಗಳ ಅನಂತರದ ಹಕ್ಕುದಾರರಿಗೆ ಅಗತ್ಯ ಪರಿಹಾರ ನೀಡಿ ಅವರ ಮನವೊಲಿಸಿ ಅವರು ಹುಟ್ಟಿ–ಬೆಳೆದ ಮನೆಗಳನ್ನು ಸರ್ಕಾರ

ಅಥವಾ ಅದಕ್ಕಾಗಿ ನೇಮಕಗೊಳ್ಳುವ ಸಂಘ-ಸಂಸ್ಥೆಗಳು ಪಡೆದು ಅವುಗಳನ್ನು ಮೂಲ ರೂಪದಲ್ಲೇ ಉಳಿಸಿ ಅವರ ಸಮಗ್ರ ದರ್ಶನವಾಗುವಂಥ ಕೇಂದ್ರವನ್ನಾಗಿ ಮಾರ್ಪಡಿಸಿ ಮುಂದಿನ ಪೀಳಿಗೆಗೆ ನಮ್ಮ ಹಿರಿಯರ ನೆನಪನ್ನುಳಿಸುವ ಕಾರ್ಯದಲ್ಲಿ ಪಾಲ್ಗೊಳ್ಳಬೇಕಾದದ್ದು ನಮ್ಮೆಲ್ಲರ ಕರ್ತವ್ಯವಾಗಬೇಕಾಗಿದೆ.

## 'ಕನ್ನಡ ಸಂಸ್ಕೃತಿ'

ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರ ಈಚೆಗೆ ನಡೆಸಿದ 'ಈ ಶತಮಾನ' ಎಂಬ ವಿಚಾರಗೋಷ್ಠಿಯಲ್ಲಿ ಕನ್ನಡ ಸಂಸ್ಕೃತಿ–ಒಂದು ಪ್ರತಿಕ್ರಿಯೆ ಎಂಬ ಗೋಷ್ಠಿಯಲ್ಲಿ ಡಾ॥ ಯು. ಆರ್. ಅನಂತಮೂರ್ತಿಯವರು 'ನಮ್ಮ ಸಂಸ್ಕೃತಿ ಉಳಿಯಬೇಕಾದರೆ ನಮ್ಮ ಭಾಷೆಯನ್ನು ಬುದ್ಧಿಪೂರ್ವಕವಾಗಿ ಕಾಯ್ದುಕೊಂಡು ಬರಬೇಕಾದ ಅಗತ್ಯವಿದೆ' ಎಂಬ ಮಾತನ್ನು ಹೇಳುತ್ತ, ನಮ್ಮ ಈಗಿನ ಮಕ್ಕಳು ಇಂಗ್ಲಿಷ್ ಮಾಧ್ಯಮಕ್ಕೆ ಮಾರುಹೋಗಿ ನಮ್ಮ ಸಂಸ್ಕೃತಿಯ ಪರಿಚಯದಿಂದ ವಂಚಿತ ರಾಗುತ್ತಿರುವುದನ್ನು ಪ್ರಬಲವಾಗಿ ವಿರೋಧಿಸಿದರು. ಭಾಷೆಯನ್ನು ಕಲಿಯದೆ ಸಂಸ್ಕೃತಿಯ ಅರಿವು ಸಾಧ್ಯವಿಲ್ಲವೆಂಬ ಮಾತನ್ನು ಹೇಳಿದರು.

ಇತ್ತೀಚೆಗೆ ಕರ್ನಾಟಕ ಸರ್ಕಾರ ಪ್ರಾಥಮಿಕ ಹಂತದಲ್ಲಿ ಕನ್ನಡ ಮಾಧ್ಯಮ ವನ್ನು ಕಡ್ಡಾಯಮಾಡುವ ಆಜ್ಞೆ ಹೊರಡಿಸಿದೆ. ಕ್ರಮಕ್ರಮವಾಗಿ ಇಂಗ್ಲಿಷ್ ಮಾಧ್ಯಮವನ್ನು ತೊಡೆದುಹಾಕುವ ಆಶಾಭಾವನೆಯಿದೆ. ಆದರೆ ಇಂಗ್ಲಿಷ್ ವ್ಯಾಮೋ ಹಕ್ಕೆ ಅಂಟಿಕೊಂಡಿರುವ ಅನೇಕರಿಂದ ಈ ಬಗ್ಗೆ ಪ್ರತಿರೋಧ ವ್ಯಕ್ತವಾಗಿದೆ. ಸರ್ಕಾರ ತನ್ನ ನಿಲುವನ್ನು ಬದಲಿಸಕೂಡದೆಂದು ಇನ್ನೂ ಕೆಲವು ಪ್ರಜ್ಞಾವಂತರು ಸರ್ಕಾರದ ಮೇಲೆ ಒತ್ತಡ ತಂದಿದ್ದಾರೆ.

ಇದರ ಜೊತೆಜೊತೆಗೇ ಕರ್ನಾಟಕ ಸರ್ಕಾರವೇ ಸಂಸ್ಕೃತಿ ನಾಶದ ಕೃತ್ಯಗಳಲ್ಲಿ ತೊಡಗಿರುವುದು ವಿಪರ್ಯಾಸವಾಗಿದೆ! 'ಸಿ' ದರ್ಜೆ ನೌಕರರಿಗಿರುವ ಕನ್ನಡ ಭಾಷಾ ಜ್ಞಾನದ ಕಡ್ಡಾಯವನ್ನು ತೆಗೆದಿರುವುದು, ನಾಗರಹೊಳೆ, ಮುಕ್ತ ವಿ.ವಿ.ಗಳಿಗೆ–ಸ್ಮಾರಕ ಭವನಗಳಿಗೆ ಸ್ವ–ಸಂಸ್ಕೃತಿಯ ಇತರರ ಹೆಸರನ್ನಿಡುವುದು, ಕೆ.ಜಿ.ಎಫ್. ನಂತಹ ಪರಭಾಷಾ ಪ್ರಾಬಲ್ಯದ ನಗರಗಳನ್ನು ಬೆಂಗಳೂರಿನ ಉಪನಗರವನ್ನಾಗಿ ಮಾರ್ಪಡಿಸುವುದು - ಇವೆಲ್ಲ ಸಂಸ್ಕೃತಿಯ ಉಳಿವಿನ ಪ್ರಯತ್ನಗಳಿಗೆ ಧಕ್ಕೆ ತರುವಂತ ಹವು. ಸರ್ಕಾರದ ಇಂಥ ಪ್ರಯತ್ನಗಳನ್ನು ಸಂಸ್ಕೃತಿಯ ಅರಿವಿರುವ ವ್ಯಕ್ತಿಗಳು ಸಂಘ-ಸಂಸ್ಥೆಗಳು ವಿರೋಧಿಸಿ ಸರ್ಕಾರಕ್ಕೆ ಮಾರ್ಗದರ್ಶಕವಾಗಬೇಕು. ಹಾಗಾದಲ್ಲಿ ಮಾತ್ರ ಕನ್ನಡ ಸಂಸ್ಕೃತಿ ಜೀವಂತವಾಗಿ ಉಳಿಯಬಲ್ಲದು.

## ಸನ್ಮಾನಗಳು

ಇತ್ತೀಚೆಗೆ ನಗರದಲ್ಲಿ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟ ಅವರಿಗೆ ಮತ್ತು ಮೈಸೂರಿನಲ್ಲಿ ಡಾ॥ ಹಾ.ಮಾ. ನಾಯಕ ಅವರುಗಳಿಗೆ ಅಭಿಮಾನಿಗಳಿಂದ ಸನ್ಮಾನ ಸಮಾರಂಭಗಳು ನಡೆದವು. ಹಲವಾರು ಗಣ್ಯರು ಪಾಲ್ಗೊಂಡಿದ್ದ ಈ ಸಮಾರಂಭ ಗಳಲ್ಲಿ ಸನ್ಮಾನಿತರ ಸಾಹಿತ್ಯಸೇವೆಯನ್ನು ಸ್ಮರಿಸಲಾಯಿತು. ಕಾಳಿದಾಸನನ್ನು ಸಮಗ್ರ ವಾಗಿ ಕನ್ನಡಕ್ಕೆ ತಂದಿರುವ ಪರಮೇಶ್ವರ ಭಟ್ಟರಿಗೆ 'ಪರಮೇಶ್ವರ ಪ್ರಶಸ್ತಿ' ಎಂಬ ಅಭಿನಂದನ ಗ್ರಂಥವನ್ನು ಕನ್ನಡ ನಾಡು–ನುಡಿಯ ಬಗ್ಗೆ ಬಿಚ್ಚುಮಾತಿನ ಮೂಲಕ ಜಾಗೃತಿ ಮೂಡಿಸುತ್ತಿರುವ ಡಾ॥ ಹಾ. ಮಾ. ನಾಯಕರಿಗೆ 'ಮಾನ' ಎಂಬ ಅಭಿನಂದನ ಗ್ರಂಥವನ್ನು ಈ ಸಮಾರಂಭಗಳಲ್ಲಿ ಸಮರ್ಪಿಸಲಾಯಿತು.

# ಪ್ರತಿಷ್ಠಾನ ವಾರ್ತೆ

## ಬಿ.ಎಂ.ಶ್ರೀ ಪ್ರತಿಷ್ಠಾನದ ನೂತನ ಅಧ್ಯಕ್ಷರಾಗಿ ಶ್ರೀ ಎನ್. ಬಸವಾರಾಧ್ಯರು



ದಿನಾಂಕ 15–3–1992ರಂದು ಸೇರಿದ್ದ ಪ್ರತಿಷ್ಠಾನದ ಕಾರ್ಯಸಮಿತಿ ಸಭೆ ಸರ್ವಾನುಮತದಿಂದ ಬಿ.ಎಂ.ಶ್ರೀ ಪ್ರತಿಷ್ಠಾನದ ಅಧ್ಯಕ್ಷ ಸ್ಥಾನಕ್ಕೆ ಶ್ರೀ ಎನ್. ಬಸವಾರಾಧ್ಯ ಅವರನ್ನು ಆಯ್ಕೆಮಾಡಿದೆ–ಎಂದು ತಿಳಿಸಲು ಸಂತೋಷಿಸುತ್ತೇವೆ.

ಈ ವರೆಗೆ ಅಧ್ಯಕ್ಷರಾಗಿದ್ದ ಪ್ರೊ॥ ಎಲ್.ಎಸ್. ಶೇಷಗಿರಿರಾವ್ ಅವರ ನಿವೃತ್ತಿಯಿಂದ ತೆರವಾಗಿದ್ದ ಸ್ಥಾನಕ್ಕೆ ಆಯ್ಕೆಗೊಂಡ ಶ್ರೀ ಎನ್. ಬಸವಾರಾಧ್ಯರು ಕೋಲಾರ ಜಿಲ್ಲೆಯ ನಾರಸಿಂಹನಹಳ್ಳಿಯಲ್ಲಿ 20-2-1926ರಲ್ಲಿ ಜನಿಸಿದರು. 1950ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಎಂ. ಎ. ಪದವೀಧರರಾದ ಇವರು ಕನ್ನಡ, ಇಂಗ್ಲಿಷ್, ತೆಲುಗು, ತಮಿಳು, ಸಂಸ್ಕೃತ, ಹಿಂದೀ ಭಾಷಾಪರಿಣತರು. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸಂಪಾದನ ವಿಭಾಗದ ಉಪನಿರ್ದೇಶಕರಾಗಿ ನಿವೃತ್ತರಾಗಿದ್ದು, ಈಗ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ

ನಿಘಂಟಿನ ಪ್ರಧಾನ ಸಂಪಾದಕರು. ಕರ್ನಾಟಕ ಸರ್ಕಾರದ ಕನ್ನಡ ಭಾಷಾಂತರ ಸರಳೀಕರಣ ಸಮಿತಿಯ ಸದಸ್ಯರು. ಮೂವತ್ತಕ್ಕೂ ಹೆಚ್ಚು ಗ್ರಂಥಸಂಪಾದನೆ ಇವರಿಂದಾಗಿದೆ. ಇವರು ಸಂಪಾದಿಸಿರುವ 'ತೊರವೆ ರಾಮಾಯಣ' ಮತ್ತು 'ಧರ್ಮನಾಥ ಪುರಾಣ' ಇವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಗಳನ್ನು ತಂದಿವೆ. ಇವರ ಸಂಪಾದನೆಯ 'ಹರಿಶ್ಚಂದ್ರ ಕಾವ್ಯ', 'ಚೇರಮ ಕಾವ್ಯ', 'ಉದ್ಭಟ ದೇವ ಚರಿತೆ'ಗಳಿಗೆ ದೇವರಾಜ ಬಹದ್ದೂರ್ ಸಾಹಿತ್ಯಿಕ ಬಹುಮಾನಗಳು ದೊರಕಿವೆ. 'ಹಳಗನ್ನಡ ನಿಘಂಟು'ವಿಗೆ ಮೈಸೂರು ವಿಶ್ವವಿದ್ಯಾಲಯದ ತೀನಂಶ್ರೀ ಸ್ಮಾರಕ ಬಹುಮಾನ ಪ್ರಾಪ್ತವಾಗಿದೆ. ಇವಲ್ಲದೆ, ಶ್ರೀಯುತರ ಸಂಶೋಧನಾತ್ಮಕವಾದ ವಿದ್ವಲ್ಲೇಖನಗಳು ನೂರಾರು ಪ್ರಕಟವಾಗಿವೆ. ಡಿ.ಎಲ್.ಎನ್. ಸಂಭಾವನಾ ಗ್ರಂಥ-'ಉಪಾಯನ' ಹಾಗೂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ ಸಂಭಾವನಾಗ್ರಂಥ 'ದೇವಗಂಗೆ' ಇವರ ಸಂಪಾದಿತ ಗ್ರಂಥಗಳು. ಭಾಷಾಶಾಸ್ತ್ರ, ವ್ಯಾಕರಣ. ಗ್ರಂಥಸಂಪಾದನೆ, ನಿಘಂಟುರಚನೆಗಳಲ್ಲಿ ಇವರು ವಿಶೇಷ ಪರಿಣತರು. ಪ್ರಕೃತ ಬಿ.ಎಂ.ಶ್ರೀ ಪ್ರತಿಷ್ಠಾನದ ಅಧ್ಯಕ್ಷರಾದುದು ಅಭಿಮಾನಕರ ಸಂಗತಿ.

## ದತ್ತಿ ಉಪನ್ಯಾಸಗಳು

ಜಿ. ಪಿ. ರಾಜರತ್ನಂ ಸ್ಮಾರಕ ದತ್ತಿ ಉಪನ್ಯಾಸದ ಅಂಗವಾಗಿ ದಿನಾಂಕ 4-2-92ರಂದು ಮಲ್ಲೇಶ್ವರಂ ಗಾಂಧಿ ಸಾಹಿತ್ಯ ಸಂಘದಲ್ಲಿ ಶ್ರೀ ಜಿ. ಅಶ್ವತ್ಥ ನಾರಾಯಣ ಅವರು "ಎಂ.ವಿ.ಸೀ. ರಚಿತ ಜೀವನ ಚಿತ್ರಗಳು" ಎಂಬ ವಿಷಯವಾಗಿ ಮಾತನಾಡಿದರು. ಶ್ರೀ ಹೊ. ಶ್ರೀನಿವಾಸಯ್ಯ ಅವರು ಅಧ್ಯಕ್ಷತೆ ವಹಿಸಿದ್ದರು.

ಬಿ.ಎಂ.ಶ್ರೀ ಸ್ಮಾರಕ ದತ್ತಿ ಉಪನ್ಯಾಸದ ಅಂಗವಾಗಿ ದಿನಾಂಕ 26-2-92 ರಂದು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯಲ್ಲಿ ಶ್ರೀ ಬಿ. ಎಸ್. ರಾಮಪ್ರಸಾದ್ ಅವರು "ಕನ್ನಡ ಸಣ್ಣಕತೆಯ ಬೇರುಗಳು" ಎಂಬ ವಿಷಯವಾಗಿ ಮಾತನಾಡಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಎಲ್. ಎಸ್. ಶೇಷಗಿರಿರಾವ್ ಅವರು ಅಧ್ಯಕ್ಷತೆ ವಹಿಸಿದ್ದರು.

## ಸಹೃದಯ ಗೋಷ್ಠಿಯ ಕಾರ್ಯಕ್ರಮಗಳು

**ಗೋಕಾಕ್ ತಿಂಗಳ ನೆನಪು :** ಯುವಜನ ವೇದಿಕೆಯಾದ ಸಹೃದಯ ಗೋಷ್ಠಿಯು ಕನ್ನಡ ಸಾರಸ್ವತ ಲೋಕದ ಚೇತನವಾದ ವಿ.ಕೃ. ಗೋಕಾಕ್ ಅವರ ಸ್ಮರಣೆಗಾಗಿ ದಿನಾಂಕ 28-5-92ರಂದು "ಗೋಕಾಕ್ ತಿಂಗಳ ನೆನಪು" ಎಂಬ ವಿಶೇಷ ಕಾರ್ಯಕ್ರಮವನ್ನು ನಡೆಸಿತು. ಶ್ರೀ ಜಿ. ನಾರಾಯಣ, ಪ್ರೊ|| ಎಲ್. ಎಸ್. ಶೇಷಗಿರಿರಾವ್ ಅವರುಗಳು ಮಾತನಾಡಿದರು. ಶ್ರೀ ಬಿಟ್ಟೂರು ಶ್ರೀನಿವಾಸರಾವ್

ಅವರು ಅಧ್ಯಕ್ಷತೆ ವಹಿಸಿದ್ದರು. ಪ್ರತಿಷ್ಠಾನದ ನೂತನ ಅಧ್ಯಕ್ಷರಾದ ಶ್ರೀ ಎನ್. ಬಸವಾರಾಧ್ಯ ಅವರು ಸ್ವಾಗತ ಕೋರಿದರು.

ಈ ಕಾರ್ಯಕ್ರಮವನ್ನು ಪ್ರತಿತಿಂಗಳೂ ನಡೆಸಲು ಆಲೋಚಿಸಿದೆ. ಈಗಾಗಲೇ ಬೇಂದ್ರೆ, ಮಾಸ್ತಿ, ಎಂ.ವಿ.ಸೀ ಸ್ಮರಣೆ ಮಾಡಿರುವಂತೆ ಈಗ ಶಂಬಾ ಸಂಸ್ಮರಣೆ ಮಾಡುತ್ತಿರುವಂತೆ 12 ಉಪನ್ಯಾಸಗಳನ್ನು ನಡೆಸಿ ಪುಸ್ತಕ ರೂಪದಲ್ಲಿ ಪ್ರಕಟಿಸುವ ಆಲೋಚನೆಯಿದೆ. ಈ ಹಿನ್ನೆಲೆಯಲ್ಲಿ ಎರಡನೇ ತಿಂಗಳ ಕಾರ್ಯಕ್ರಮವಾಗಿ 'ಗೋಕಾಕ್ ಮತ್ತು ಕನ್ನಡ' ಎಂಬ ವಿಷಯದಲ್ಲಿ ದಿನಾಂಕ 30-6-92ರಂದು ಡಾ॥ ಚಿದಾನಂದ ಮೂರ್ತಿಗಳು, ಕೆ. ರಾಜಕುಮಾರ್ ಅವರು ಮಾತನಾಡಿದರು. ಪ್ರತಿಷ್ಠಾನ ಅಧ್ಯಕ್ಷರಾದ ಶ್ರೀ ಎನ್. ಬಸವಾರಾಧ್ಯ ಅವರು ಅಧ್ಯಕ್ಷತೆ ವಹಿಸಿದ್ದರು. ಕಾರ್ಯಕ್ರಮವು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಬೆಂಗಳೂರು ನಗರ ಜಿಲ್ಲಾ ಸಾಹಿತ್ಯ ಪರಿಷತ್ತಿನ ಸಂಯುಕ್ತ ಆಶ್ರಯದಲ್ಲಿ ನಡೆಯಿತು.

**ಶಂಬಾ ಸಂಸ್ಮರಣೆ:** ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಹೃದಯ ಗೋಷ್ಠಿ ಮತ್ತು ಶಂ. ಬಾ. ಜೋಶಿ ಸಂಸ್ಮರಣ ಸಮಿತಿ ಕೂಡಿ ನಡೆಸುತ್ತಿರುವ ಈ ಉಪನ್ಯಾಸ ಮಾಲೆಯಲ್ಲಿ ಈ ಕೆಳಕಂಡಂತೆ ಉಪನ್ಯಾಸಗಳು ನಡೆದವು.

ದಿನಾಂಕ 28-1-92ರಂದು ಮಲ್ಲೇಶ್ವರಂ ಗಾಂಧಿ ಸಾಹಿತ್ಯ ಸಂಘದಲ್ಲಿ ಶ್ರೀ ಜೆ. ಶ್ರೀನಿವಾಸಮೂರ್ತಿಯವರು "ಶ್ರೀಮತ್ ಭಗವದ್ಗೀತೆಯಲ್ಲಿ ಹುದುಗಿರುವ ರಾಜಯೋಗದ ಸ್ವರೂಪ" ಎಂಬ ವಿಷಯವಾಗಿ ಮಾತನಾಡಿದರು.

ದಿನಾಂಕ 28-4-92ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಶ್ರೀ ರಾಮಭಟ್ಟರು "ಮಹರ್ಷಿ ಅರವಿಂದ ಘೋಷ–ಇವರ ಚರಿತ್ರವು" ಎಂಬ ವಿಷಯವಾಗಿ ಮಾತನಾಡಿದರು.

ದಿನಾಂಕ 17–5-92ರಂದು ಗಾಂಧಿ ಸಾಹಿತ್ಯ ಸಂಘದಲ್ಲಿ ಪ್ರೊ॥ ಎಂ. ಎಚ್. ಕೃಷ್ಣಯ್ಯ ಅವರು ಸಂತೋಷವೇ ಏಳ್ಗೆಯ ಮೂಲ ಮತ್ತು ದಾರಿ ಬುತ್ತಿ ಎಂಬ ವಿಷಯವಾಗಿ ಮಾತನಾಡಿದರು.

ದಿನಾಂಕ 28–5–92ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಶ್ರೀ ಬಿ.ಸಿ. ವೀರಪ್ಪನವರು "ರೂಢಿ ಮತ್ತು ಭಾವಿಕ ಕಲ್ಪನೆಗಳು ಮಕ್ಕಳ ಒಡಪುಗಳು" ಎಂಬ ವಿಷಯವಾಗಿ ಮಾತನಾಡಿದರು.

13–6–92ರಂದು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಶ್ರೀ ನರಹಳ್ಳಿ ಬಾಲಸುಬ್ರಮಣ್ಯ ಅವರು "ಕರ್ಣನ ಮೂರು ಚಿತ್ರಗಳು" ಎಂಬ ವಿಷಯವಾಗಿಯೂ ದಿನಾಂಕ 28–6–92ರಂದು ಶ್ರೀ ಕೆ. ಸತ್ಯನಾರಾಯಣ ಅವರು ಸಮಾಜ ದರ್ಶನ ಮತ್ತು ಬರಲಿರುವ ಸಮಾಜ ವಿಷಯವಾಗಿ ಮಾತನಾಡಿದರು.

## ಸಾವಿತ್ರಮ್ಮ ದತ್ತಿನಿಧಿ ಪ್ರಶಸ್ತಿ

ಸಂಸ್ಥಾಪಕರಾದ ದಿ॥ ಪ್ರೊ. ಎಂ. ವಿ. ಸೀತಾರಾಮಯ್ಯನವರು ಸ್ಥಾಪಿಸಿರುವ ಈ ದತ್ತಿ ನಿಧಿಯಲ್ಲಿ ಎರಡನೇ ಪ್ರಶಸ್ತಿಯು ಮಕ್ಕಳ ಸಾಹಿತ್ಯವಾದ ಚಂದ್ರಗೌಡ ಕುಲಕರ್ಣಿ, ತಾಳಿಕೋಟೆ ಅವರ "ಬೆಣ್ಣೆ ಹಳ್ಳ" ಎಂಬ ಕವನಸಂಕಲನಕ್ಕೆ ಬಂದಿದೆ. ಇದಕ್ಕಾಗಿ ನೇಮಕಗೊಂಡಿದ್ದ ಎಚ್. ಎಸ್. ಪಾರ್ವತಿ, ಡಾ॥ ಎಚ್.ಎಸ್. ವೆಂಕಟೇಶ ಮೂರ್ತಿ ಮತ್ತು ಸೂ. ಸುಬ್ರಮಣ್ಯ ಅವರನ್ನೊಳಗೊಂಡ ತೀರ್ಪು ಸಮಿತಿ ಈ ಕೃತಿ ಯನ್ನು ಆಯ್ಕೆಮಾಡಿದೆ. ಪ್ರಶಸ್ತಿಯ ಮೊತ್ತ 1,000 ರೂಪಾಯಿಗಳು.

# ಅಭಿನಂದನೆ

## ಪಂಪ ಪ್ರಶಸ್ತಿ

ಖ್ಯಾತ ಸಾಹಿತಿ, ಜ್ಞಾನಪೀಠ ಪ್ರಶಸ್ತಿ ವಿಜೇತ ಡಾ॥ ಕೆ. ಶಿವರಾಮ ಕಾರಂತರ "ಮೈಮನಗಳ ಸುಳಿಯಲ್ಲಿ" ಮತ್ತು ದಿವಂಗತ ಎಸ್. ಎಸ್. ಭೂಸನೂರ ಮಠ ಅವರ "ಶೂನ್ಯಸಂಪಾದನೆಯ ಪರಾಮರ್ಶೆ" ಗ್ರಂಥಗಳಿಗೆ ಕ್ರಮವಾಗಿ 1990 ಮತ್ತು 1991ನೆ ಸಾಲಿನ ಪ್ರತಿಷ್ಠಿತ ಪಂಪ ಪ್ರಶಸ್ತಿಯನ್ನು ಸರ್ಕಾರ ನೀಡಿ ಗೌರವಿಸಿದೆ.

## ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಡಾ॥ ಕಂಬಾರ

ಕರ್ನಾಟಕ ಸರ್ಕಾರ ಹಂಪಿಯಲ್ಲಿ ಸ್ಥಾಪಿಸಿರುವ ಕನ್ನಡ ವಿಶ್ವವಿದ್ಯಾಲಯಕ್ಕೆ ಆಡಳಿತಾಧಿಕಾರಿಗಳನ್ನಾಗಿ ನೇಮಕ ಮಾಡಿದ್ದ ಡಾ॥ ಚಂದ್ರಶೇಖರ ಕಂಬಾರ ಅವರನ್ನು ಇತ್ತೀಚೆಗೆ ಕುಲಪತಿಗಳಾಗಿ ನೇಮಿಸಿ ವಿಶ್ವವಿದ್ಯಾಲಯಕ್ಕೆ ಹೊಸ ಚಾಲನೆ ನೀಡಿದೆ. ಕನ್ನಡ ನಾಡು ನುಡಿಯ ಬಗ್ಗೆ ಅಪಾರ ಕಾಳಜಿ ಇರುವ, ಪ್ರಸಿದ್ಧ ಕವಿ, ನಾಟಕಕಾರ ಆಗಿರುವ ಡಾ॥ ಕಂಬಾರರ ನೇತೃತ್ವದಲ್ಲಿ ವಿಶ್ವವಿದ್ಯಾಲಯ ಅರ್ಥಪೂರ್ಣ ಹೆಜ್ಜೆ ಗಳನ್ನು ಇಡುತ್ತದೆಂಬ ಭರವಸೆ ಕನ್ನಡಿಗರಿಗಿದೆ.

## ಗೊ.ರು.ಚ. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆ

ಇತ್ತೀಚೆಗೆ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರ ಚುನಾವಣೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಯಾಗಿದ್ದ ಜಾನಪದ ವಿದ್ವಾಂಸ ಗೊ.ರು. ಚನ್ನಬಸಪ್ಪ ಅವರು ನೂತನ ಅಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ.

### ಸಾವಿತ್ರಮ್ಮ ಅವರಿಗೆ ಅನುಪಮ ಪ್ರಶಸ್ತಿ

ಕನ್ನಡ ಲೇಖಕಿಯರಿಗಾಗಿ ಕರ್ನಾಟಕ ಲೇಖಕಿಯರ ಸಂಘ ಡಾ॥ ಅನುಪಮ ನಿರಂಜನ ಅವರ ಹೆಸರಿನಲ್ಲಿ ಹೊಸದಾಗಿ ಸ್ಥಾಪಿಸಿರುವ ಪ್ರಶಸ್ತಿಗೆ ಈ ವರ್ಷ ಶ್ರೀಮತಿ ಎಚ್. ವಿ. ಸಾವಿತ್ರಮ್ಮ ಅವರನ್ನು ಆಯ್ಕೆ ಮಾಡಿದೆ.

### ಶಶಿ ದೇಶಪಾಂಡೆ ಅವರಿಗೆ ತಿರುಮಲಾಂಬ ಪ್ರಶಸ್ತಿ

ನಗರ ಎನ್.ಎಂ.ಕೆ.ಆರ್.ವಿ. ಶಾಶ್ವತೀ ಮಹಿಳಾ ಅಧ್ಯಯನ ಕೇಂದ್ರ ನೀಡುವ ನಂಜನಗೂಡು ತಿರುಮಲಾಂಬ ಪ್ರಶಸ್ತಿಯು 1989–90ನೇ ಸಾಲಿಗೆ ಶಶಿ ದೇಶಪಾಂಡೆ ಅವರ 'ದಿ ಡಾರ್ಕ್ ಹೋಲ್ಡ್ಸ್ ನೋ ಟೆರರ್' ಎಂಬ ಗ್ರಂಥಕ್ಕೆ ದೊರೆತಿದೆ. ಈ ಪ್ರಶಸ್ತಿ ರಾಷ್ಟ್ರಮಟ್ಟದಲ್ಲಿ ಲೇಖಕಿಯರಿಗೆ ನೀಡುವ ಕರ್ನಾಟಕದ ಪ್ರಶಸ್ತಿಯಾಗಿದೆ.

### ಜಾನಪದ ಅಕಾಡೆಮಿಯ ಪ್ರಶಸ್ತಿ

ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯು 1990ನೇ ಸಾಲಿನ ಪ್ರಶಸ್ತಿಯನ್ನು ಜಾನಪದ ವಿದ್ವಾಂಸರುಗಳಾದ ಡಾ॥ ಹಾ. ಮಾ. ನಾಯಕ ಮತ್ತು ಡಾ॥ ಬಿ. ಬಿ. ಹೆಂಡಿಯವರಿಗೂ ಮತ್ತು 1991ನೇ ಸಾಲಿನ ಪ್ರಶಸ್ತಿಯನ್ನು ಪ್ರೊ॥ ಕು. ಶಿ. ಹರಿದಾಸ ಭಟ್ಟ ಅವರಿಗೂ ನೀಡಿ ಗೌರವಿಸಿದೆ.

### ನಾಟಕ ಅಕಾಡೆಮಿ ಫೆಲೋಷಿಪ್

ಕರ್ನಾಟಕ ನಾಟಕ ಅಕಾಡೆಮಿಯು 1990ನೇ ಸಾಲಿಗೆ ಶ್ರೀ ಕೀರ್ತಿನಾಥ ಕುರ್ತುಕೋಟಿ ಮತ್ತು ಡಾ॥ ಎಚ್.ಎಲ್. ನಾಗೇಗೌಡ ಅವರಿಗೂ 1991ನೇ ಸಾಲಿಗೆ ಪ್ರೊ॥ ಚಿ. ನಾ. ಮಂಗಳ ಅವರಿಗೂ ಗೌರವ ಫೆಲೋಷಿಪ್‌ಅನ್ನು ನೀಡಿ ಗೌರವಿಸಿದೆ.

ಈ ಎಲ್ಲಾ ಮಹನೀಯರುಗಳಿಗೂ ಪ್ರತಿಷ್ಠಾನದ ವಿಶ್ವಾಸಪೂರ್ವಕವಾದ ಅಭಿನಂದನೆ ಸಲ್ಲುತ್ತದೆ.

## ಶ್ರದ್ಧಾಂಜಲಿ

### ಕೆ. ಎಸ್. ನಿರಂಜನ

ಖ್ಯಾತ ಸಾಹಿತಿಗಳಾದ ನಿರಂಜನ ಅವರು ದಿನಾಂಕ 13–3–92ರಂದು ನಿಧನರಾದರು. ಪ್ರಗತಿಶೀಲ ಸಾಹಿತ್ಯದಲ್ಲಿ ತಮ್ಮ ಹಲವಾರು ಕಾದಂಬರಿಗಳ ಮೂಲಕ ಗಟ್ಟಿ ಹೆಜ್ಜೆಗಳನ್ನು ಮೂಡಿಸಿದ್ದ, ಅಂಕಣಗಳ ಮೂಲಕ ಖ್ಯಾತರಾದ ಪ್ರತಿಭಾವಂತ

ಲೇಖಕ ನಿರಂಜನರ ಕೊಡುಗೆ ಹಲವಾರು. ಕಿರಿಯರಿಗಾಗಿ ಹೊರತಂದ ಜ್ಞಾನ ಗಂಗೋತ್ರಿ (7 ಸಂಪುಟ) 'ವಿಶ್ವಕಥಾ ಕೋಶಗಳು' ಅಮೂಲ್ಯವಾದವು.

ದಿವಂಗತರು ಪತ್ರಿಕೋದ್ಯಮಿಯಾಗಿ ಅಂಕಣಕಾರರಾಗಿ ಪತ್ರಿಕೆಗಳಲ್ಲಿ ಸೇವೆ ಸಲ್ಲಿಸಿದ್ದರು.

ಗೌರವ ಡಾಕ್ಟರೇಟ್, ಸಾಹಿತ್ಯ ಪರಿಷತ್ತಿನ ಗೌರವ ಸದಸ್ಯತ್ವ, ಸೋವಿಯತ್ ಲ್ಯಾಂಡ್ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿಗಳನ್ನು ಪಡೆದಿದ್ದ ಕೆ. ಎಸ್. ನಿರಂಜನರ ಅಗಲಿಕೆಯಿಂದ ಕನ್ನಡ ಸಾರಸ್ವತ ಲೋಕ ಬಡವಾಗಿದೆ.

## ಡಾ॥ ವಿ. ಕೃ. ಗೋಕಾಕ್

ಭಾರತೀಯ ಜ್ಞಾನಪೀಠ ಪ್ರಶಸ್ತಿ ವಿಜೇತ ಪದ್ಮಶ್ರೀ ಡಾ॥ ವಿ. ಕೃ. ಗೋಕಾಕ್ ಅವರು 25–4–92ರಂದು ಮುಂಬೈಯಲ್ಲಿ ನಿಧನರಾದರು.

ಕನ್ನಡ ಸಾಹಿತ್ಯಕ್ಕೆ ಭಾರತೀಯ ಮಟ್ಟದಲ್ಲಿ ಪ್ರತಿಷ್ಠಿತ ಸ್ಥಾನವನ್ನು ಕಲ್ಪಿಸಲು ನೆರವಾಗಿದ್ದ ಗೋಕಾಕರು ಇತ್ತೀಚೆಗೆ ತಾನೆ ಐದನೇ ಜ್ಞಾನಪೀಠ ಪ್ರಶಸ್ತಿಯನ್ನು ತಂದುಕೊಡುವುದರ ಮೂಲಕ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ, ರಾಷ್ಟ್ರಮಟ್ಟದಲ್ಲಿ ಕನ್ನಡ ವನ್ನು ಅಗ್ರಮಾನ್ಯ ಭಾಷೆಯನ್ನಾಗಿಸಿದ್ದರು.

ಬೆಂಗಳೂರು ವಿಶ್ವವಿದ್ಯಾಲಯ ಹಾಗೂ ಸತ್ಯಸಾಯಿ ವಿಶ್ವವಿದ್ಯಾಲಯಗಳ ಉಪ ಕುಲಪತಿಗಳಾಗಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಹೀಗೆ ಹಲವಾರು ಉನ್ನತ ಸ್ಥಾನಗಳಲ್ಲಿ ಸೇವೆ ಸಲ್ಲಿಸಿದ್ದ ದಿವಂಗತರು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಸದಸ್ಯರೂ ಆಗಿದ್ದರು.

ಗೋಕಾಕ್ ಭಾಷಾ ಸಮಿತಿಯ ಅಧ್ಯಕ್ಷರಾಗಿ ಅವರು ನೀಡಿದ ವರದಿ ಕರ್ನಾಟಕ ದಲ್ಲೇ ದೊಡ್ಡ ಕ್ರಾಂತಿಯನ್ನು ಎಬ್ಬಿಸಿ ಕನ್ನಡವನ್ನು ಜಾಗೃತಗೊಳಿಸುವಲ್ಲಿ ಯಶಸ್ವಿ ಯಾಗುವುದರ ಮೂಲಕ ಗೋಕಾಕ್ ಮನೆ ಮಾತಾಗಿದ್ದಾರೆ.

'ಭಾರತಸಿಂಧುರಶ್ಮಿ' ಮಹಾಕಾವ್ಯದ ಕರ್ತೃವಾಗಿರುವ ದಿವಂಗತರು ಇನ್ನೂ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ನವ್ಯ ಸಾಹಿತ್ಯದ ಹೆಜ್ಜೆ ಗಳನ್ನು ಮೂಡಿಸಿದ ಮೊದಲಿಗರು ಆಗಿದ್ದ ಡಾ॥ ಗೋಕಾಕರ ನಿಧನದಿಂದ ಕನ್ನಡ ಸಾರಸ್ವತ ಲೋಕ ಬಡವಾಗಿದೆ.

## ಪಾ. ವೆಂ. ಆಚಾರ್ಯ

ಹಿರಿಯ ಪತ್ರಕರ್ತ ಕವಿ ವಿಮರ್ಶಕ ಪಾಡಿಗಾರು ವೆಂಕಟರಮಣ ಆಚಾರ್ಯ ಅವರು ದಿನಾಂಕ 4–5–92ರಂದು ನಿಧನರಾದರು.

ದಿವಂಗತರು ಇತ್ತೀಚೆಗೆ ಪತ್ರಿಕೋದ್ಯಮ ಸಾಧನೆಗೆ ಮೀಸಲಾದ ಒಂದು ಲಕ್ಷ ರೂ. ಮೌಲ್ಯದ ಬಿ. ಡಿ. ಗೋಯಂಕ ಪ್ರಶಸ್ತಿಯನ್ನು ಕನ್ನಡಕ್ಕೆ ತಂದು ಕೊಟ್ಟಿದ್ದ ರಲ್ಲದೆ ಮುಂಬೈ ಸರ್ಕಾರದ ಬಹುಮಾನ ಪಿ. ಆರ್. ರಾಮಯ್ಯ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ವರ್ಧಮಾನ ಪ್ರಶಸ್ತಿಗಳನ್ನು ಪಡೆದಿದ್ದರು.

ಸಂಪಾದಕರಾಗಿ ಅಂಕಣಕಾರರಾಗಿ ವಿದ್ವಾಂಸರಾಗಿ ಪಾ. ವೆಂ. ಆಚಾರ್ಯರು ಪತ್ರಿಕೋದ್ಯಮಕ್ಕೆ ಸಲ್ಲಿಸಿದ ಸೇವೆ ಸ್ಮರಣೀಯವಾದುದು.

ಪ್ರತಿಷ್ಠಾನವು ಮೃತರ ಆತ್ಮಕ್ಕೆ ಶಾಂತಿ ಕೋರಿ ಸಂತಾಪವನ್ನು ವ್ಯಕ್ತಪಡಿಸು ತ್ತದೆ. ಮೃತರ ಕುಟುಂಬಕ್ಕೆ ದುಃಖಭರಿಸುವ ಶಕ್ತಿಯನ್ನು ಕರುಣಿಸಲೆಂದು ಆಶಿಸುತ್ತದೆ.

## ಎಂ. ಎಸ್. ಸುಂಕಾಪುರ

ಕನ್ನಡದ ಶ್ರೇಷ್ಠ ವಿದ್ವನ್ಮಣಿಯೂ ಜಾನಪದ ವಿದ್ವಾಂಸರೂ ಆದ ಡಾ॥ ಎಂ. ಎಸ್. ಸುಂಕಾಪುರ ಅವರು **30-6-1992**ರಂದು ತಮ್ಮ **73**ನೆಯ ವರ್ಷವಯಸ್ಸಿ ನಲ್ಲಿ ದಿವಂಗತರಾದರು. ಬಾಗಲಕೋಟೆ ಬಸವೇಶ್ವರ ಕಾಲೇಜಿನಲ್ಲಿ ಅಧ್ಯಾಪನದ ಅನಂತರ ಇವರು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಅಲ್ಲಿ ಕನ್ನಡ ಅಧ್ಯಯನ ಪೀಠದ ನಿರ್ದೇಶಕರಾಗಿ ನಿವೃತ್ತರಾದರು. ಇವರ 'ಕನ್ನಡ ಸಾಹಿತ್ಯದಲ್ಲಿ ಹಾಸ್ಯ' ಎಂಬ ಸಂಪ್ರಬಂಧಕ್ಕೆ ರಾಷ್ಟ್ರಪತಿಗಳ ಬಹುಮಾನ ಪ್ರಾಪ್ತವಾಗಿತ್ತು. ಇವರು ಅಪಾರ ಜಾನಪದ ಸಾಹಿತ್ಯವನ್ನು ಬೆಳಕಿಗೆ ತಂದಿದ್ದಾರೆ. ಉತ್ತಮ ವಾಗ್ಮಿ ಮತ್ತು ಸಾಹಿತ್ಯಕಾರರಾದ ಇವರ ಅಗಲಿಕೆಗಾಗಿ ಬಿ.ಎಂ.ಶ್ರೀ ಪ್ರತಿಷ್ಠಾನ ವಿಷಾದಿಸುತ್ತದೆ. ಮೃತರ ಆತ್ಮಕ್ಕೆ ಶಾಂತಿಯನ್ನು ಪ್ರಾರ್ಥಿಸುತ್ತದೆ.

# ಲೇಖಕರ ವಿಳಾಸಗಳು

1 ಬಿ. ಎಸ್. ರಾಮಪ್ರಸಾದ್
41, 6ನೇ ಕ್ರಾಸ್, ಪ್ರಶಾಂತನಗರ, ಬೆಂಗಳೂರು-560 079

2 ಡಾ॥ ಚೌಕಾರು ಪರಮೇಶ್ವರ ಭಟ್ಟ
ಪ್ರಾಧ್ಯಾಪಕರು, ಕಾವೇರಿ ಕಾಲೇಜು, ಗೋಣಿಕೊಪ್ಪಲು, ಕೊಡಗು ಜಿಲ್ಲೆ

3 ಡಾ॥ ಟಿ. ವಿ. ವೆಂಕಟಾಚಲ ಶಾಸ್ತ್ರೀ
ಪ್ರಾಧ್ಯಾಪಕರು, ಮಾನಸಗಂಗೋತ್ರಿ, ಮೈಸೂರು

4 ಪಿ. ಬಸವಣ್ಣ
ಶ್ರೀ ಶಂಭುಲಿಂಗ ಕ್ಷೇತ್ರ, ಚಿಲುಕವಾಡಿ, ಕೊಳ್ಳೇಗಾಲ ತಾಲ್ಲೂಕು-561 486

5 ವಿ. ಆರ್. ಶ್ರೀನಿವಾಸನ್
908/ಸಿ, 19ನೆಯ ಮುಖ್ಯರಸ್ತೆ, ಶ್ರೀ ರಾಜೇಶ್ವರೀ ನಗರ, ಬೆಂಗಳೂರು-39

6 ಡಾ॥ ಕೆಳದಿ ವೆಂಕಟೇಶ ಜೋಯಿಸ್
ಕೆಳದಿ-477 401, ಸಾಗರ-ಶಿವಮೊಗ್ಗ

7 ಎಂ. ಜಿ. ವಾರಿ
ಪ್ರಾಧ್ಯಾಪಕರು, ಎಸ್.ವಿ.ಪಿ. ಪದವಿ ಕಾಲೇಜು, ಬಾದಾಮಿ

8 ಸೀತಾರಾಮ ಜಾಗೀರ್ದಾರ್
406, ಬಿ, 3ನೇ ಮೇನ್, 7ನೇ ಕ್ರಾಸ್, ಸರಸ್ವತೀಪುರಂ, ಮೈಸೂರು-9

9 ಕೆ. ವಿ. ಶ್ರೀನಿವಾಸಮೂರ್ತಿ
ಪ್ರಾಧ್ಯಾಪಕರು, ವಿಜಯ ಕಾಲೇಜು, ಬಸವನಗುಡಿ, ಬೆಂಗಳೂರು-560 004

10 ಎಚ್. ಎನ್. ಮುರಳೀಧರ
391, 2ನೇ ಕ್ರಾಸ್, ಎನ್. ಆರ್. ಕಾಲೋನಿ, ಬೆಂಗಳೂರು-560 019

11 ಡಿ. ವಿ. ಪರಮಶಿವಮೂರ್ತಿ
18/2, 15ನೇ ಕ್ರಾಸ್, 'ಎ' ಬ್ಲಾಕ್, ಭುವನೇಶ್ವರೀ ನಗರ, ಮಾಗಡಿ ರಸ್ತೆ,
ಬೆಂಗಳೂರು-560 023

12 ವಿದ್ವಾನ್ ಎನ್. ರಂಗನಾಥ ಶರ್ಮಾ
ಜಾನಕೀಕೃಪಾ,
83, 4ನೇ ಮೇಯಿನ್, ವಿಜಯನಗರ, ಬೆಂಗಳೂರು-560 040

13 ಎಂ. ಕೆ. ಗೋಪಿನಾಥ್
C/o ಅ. ರಾ. ಮಿತ್ರ, 134, ಶಂಕರನಿಲಯ, (ಮಹಡಿ)
I 'ಆರ್' ಬ್ಲಾಕ್, ರಾಜಾಜಿನಗರ, ಬೆಂಗಳೂರು-560 010

| | | |
|---|---|---|
| 32. | ಕನ್ನಡ ಕಣ್ವ ಬಿ.ಎಂ.ಶ್ರೀ. (ಮಕ್ಕಳಿಗೆ) | 1 50 |
| 33. | ಶ್ರೀಯವರ ಆಯ್ದ ಕವನಗಳು | 2 00 |
| 34. | ಶ್ರೀನಿಧಿ (ಸಂಸ್ಮರಣ ಸಂಪುಟ) | 60 00 |
| 35. | B.M.S. : The Man and His Mission | 25 00 |
| 36. | ಶ್ರೀಗಂಧ (ಸಂಸ್ಮರಣ ಸಂಚಿಕೆ) | 10 00 |
| 37. | ಇಂಗ್ಲಿಷ್ ಗೀತಗಳು (ಇಂಗ್ಲ ಮೂಲ ಕವನಗಳೊಂದಿಗೆ 20-00†) | 12 00 |
| 38. | The Improvement of Kannada—B.M.Sri. | 6 00 |
| 39. | ಪ್ರೊಫೆಸರ್ ಟಿ. ಎಸ್. ವೆಂಕಣ್ಣಯ್ಯ | 4 00 |
| 40. | ಭಾರತದ ಶ್ರೀಕೃಷ್ಣ | 6 00 |
| 41. | ಅಶ್ವತ್ಥಾಮ ('ಶ್ರೀ' ನಾಟಕದ ಸರಳಾನುವಾದ) | 6 00 |

## ದಶಮಾನೋತ್ಸವ ಸ್ಮೃತಿಮಾಲೆ

| | | |
|---|---|---|
| 42. | ಭಾಷಾಂತರ ಕಲೆ | 15 00 |
| 43. | ಸೃಜನಶೀಲತೆ ಮತ್ತು ಪಾಂಡಿತ್ಯ | 10 00 |
| 44. | ಹೊಸಗನ್ನಡದ ವ್ಯಾಕರಣ | 15 00 |
| 45. | ವೈಚಾರಿಕ ಜಾಗೃತಿ | 15 00 |
| 46. | ಸಾಹಿತ್ಯ-ಮನಶ್ಶಾಸ್ತ್ರ (ಸಿದ್ಧತೆಯಲ್ಲಿ) | |
| 47. | ತೌಲನಿಕ ಸಾಹಿತ್ಯ | |
| 48. | ಕರ್ನಾಟಕ ಸಂಸ್ಕೃತಿ ಭಾರತೀಯತೆ | |
| 49. | ಹಸ್ತಪ್ರತಿ ಶಾಸ್ತ್ರ (ಸಿದ್ಧತೆಯಲ್ಲಿ) | |
| 50. | ಅಂತರರಾಷ್ಟ್ರೀಯ ಕಾನೂನು (ಸಿದ್ಧತೆಯಲ್ಲಿ) | |
| 51. | ಶಾಸನಪತ್ರ ,, | |

## ಇತರ ಪ್ರಕಟಣೆಗಳು

(ಇವುಗಳ ಮಾರಾಟದಿಂದ ಬಂದ ಹಣ ಪ್ರತಿಷ್ಠಾನದ ನಿಧಿಗೆ ಸೇರುತ್ತದೆ.)

| | | |
|---|---|---|
| 1. | ಅಧ್ಯಯನ† (ಡಾ॥ ಶಂ. ಬಾ. ಜೋಶಿ ಅಭಿನಂದನ ಸಮಿತಿ ಕೊಡುಗೆ) | 50 00 |
| 2. | ಕವಿಜಿಹ್ವಾಬಂಧನ (ಶ್ರೀಮತಿ ಕೆ. ಶಾಂತ ಅವರ ಕೊಡುಗೆ) | 2 00 |
| 3. | ಆಸ್ವಾದ (ಪ್ರೊ॥ ಎಂ.ವಿ.ಸೀ. ಅಭಿನಂದನ ಗ್ರಂಥ) | 75 00 |
| 4. | ಕಾಣಿಕೆ (ನಾ. ಗೀತಾಚಾರ್ಯರ ಕೊಡುಗೆ) | 5 00 |
| 5. | ಪಟ್ಟಬಂಧ (ನಾಟಕ) ವಿ.ಸೀ. (ಶುಭ ಪ್ರಕಾಶನದ ಕೊಡುಗೆ) | 6 00 |
| 6. | ಚಿಂತನ ಮಂಥನ (ಎಚ್. ಎಸ್. ಪಾರ್ವತಿ ಅವರ ಕೊಡುಗೆ) | 10 00 |
| 7. | ಷೇಕ್ಸ್‌ಪಿಯರನ 12ನೇ ರಾತ್ರಿ (ಡಾ॥ ಪಿ. ವಿ. ನಾರಾಯಣರ ಕೊಡುಗೆ) | 16 00 |
| 8. | ನವದಂಪತಿಗಳು (ಕೆ. ರಾಜಾರಾಯರ ಕೊಡುಗೆ) | 10 00 |

---

* ಈ ಪುಸ್ತಕಗಳಿಗೆ ಪ್ರತಿಷ್ಠಾನದ ಸದಸ್ಯರಿಗೆ ಶೇ. 50 ರಿಯಾಯಿತಿ.

† ಪ್ರತಿಗಳು ಮುಗಿದಿವೆ.

## ಪ್ರತಿಷ್ಠಾನದ ಪ್ರಕಟಣೆಗಳು

| | | |
|---|---|---|
| 1. | ಮಣಿಹ (ಫ.ಗು. ಹಳಕಟ್ಟಿ ಸಂಸ್ಮರಣ ಸಂಪುಟ) | 50 00 |
| 2. | ಬೇಂದ್ರೆ ಸ್ಮೃತಿ *† | 5 00 |
| 3. | ಸರ್ವಜ್ಞ ವಚನಗಳು* † | 15 00 |
| 4. | ಸೂತ ಭಾರತ* | 15 00 |
| 5. | ಶ್ರೀಕೃಷ್ಣದೇವರಾಯ ದಿನಚರಿ | 10 00 |
| 6. | ಹಸ್ತಪ್ರತಿ ಶಾಸ್ತ್ರ | 15 00 |
| 7. | ಮಾಸ್ತಿ ಸ್ಮರಣೆ | 15 00 |
| 8. | ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ :–ಭಾಗ-೧* | 20 00 |
| 9. | Early Vijayanagara : its History & Culture* | 60 00 |
| 10. | ಸಂಗಮರ ಕಾಲದ ವಿಜಯನಗರ* | 75 00 |
| 11. | Sovenier of Vijayanagara Seminer *† | 10 00 |
| 12. | ಮರುನ್ನಂದನ ಶತಕಂ* | 5 00 |
| 13. | ಚಂದ್ರ ಚೂಡಾಮಣಿ ಶತಕ* | 10 00 |
| 14. | ಶ್ರೀನಿವಾಸ ಕಲ್ಯಾಣ * | 10 00 |
| 15. | ಕನ್ನಡ ಸಾಹಿತ್ಯದಲ್ಲಿ ಅದ್ವೈತ† | 10 00 |
| 16. | ಕುಮಾರವ್ಯಾಸ ಭಾರತ ಸಂಗ್ರಹ (ಉತ್ತಮ ಪ್ರತಿ : 75-00*) | 40 00 |
| 17. | ಎಂ.ವಿ.ಸೀ. ಸಂಸ್ಮರಣೆ (ಅಚ್ಚಿನಲ್ಲಿ) | |
| 18. | ಕದಂಬ (ಎಂ.ವಿ.ಸೀ. ಸಮಗ್ರ ಲೇಖನ ಸಂಪುಟ) (ಸಿದ್ಧತೆಯಲ್ಲಿ) | |

## ದತ್ತಿ ಉಪನ್ಯಾಸಮಾಲೆ

| | | |
|---|---|---|
| 19. | ಮೂರು ದತ್ತಿ ಉಪನ್ಯಾಸಗಳು | 10 00 |
| 20. | ವೈವಸ್ವತ ಮನು | 5 00 |
| 21. | ಸ್ವಾಯಂಭುವ ಮನು : ವೈವಸ್ವತ ಮನು - ತೌಲನಿಕ ಅಧ್ಯಯನ | 5 00 |
| 22. | ಮೂರು ದತ್ತಿ ಉಪನ್ಯಾಸಗಳು—೧೯೮೪ | 10 00 |
| 23. | ದತ್ತಿ ಉಪನ್ಯಾಸಗಳು—೧೯೮೬ | 10 00 |
| 24. | ದತ್ತಿ ಉಪನ್ಯಾಸಗಳು—೧೯೮೮ | 10 00 |
| 25. | ದತ್ತಿ ಉಪನ್ಯಾಸಗಳು—೧೯೯೦ | 10 00 |

## ತಿಮ್ಮಪ್ಪದಾಸ ಪ್ರಕಾಶನ ಮಾಲೆ

| | | |
|---|---|---|
| 26. | ಕೀರ್ತನೆ ಕುಸುಮಾಂಜಲಿ | 10 00 |
| 27. | ಧ್ರುವ ಚರಿತ್ರೆ* | 15 00 |
| 28. | ಶ್ರೀಕೃಷ್ಣ ಬಾಲಲೀಲೆ ಭಾಗ-೧* | 75 00 |
| 29. | " ಭಾಗ-೨* (ಅಚ್ಚಿನಲ್ಲಿ) | 75 00 |

## ಜನ್ಮಶತಾಬ್ದಿ ಸ್ಮೃತಿಮಾಲೆ

| | | |
|---|---|---|
| 30. | ಶ್ರೀವಾಣಿ (ಸೂಕ್ತಿ ಸಂಗ್ರಹ) | 1 00 |
| 31. | ಆಚಾರ್ಯ ಬಿ.ಎಂ.ಶ್ರೀ. (ಜೀವನ ಚಿತ್ರ) | 2 00 |